ಕುರ್‌ಆನ್ ಮತ್ತು ಪ್ರವಾದಿ ಚರ್ಯೆಯ ತತ್ವಾದರ್ಶಗಳನ್ನು ಸಾರುವ

# ಪವಿತ್ರ ಸಂದೇಶ

ಕನ್ನಡ ಪಾಕ್ಷಿಕ

ಚಂದಾದರ ವಿವರ

| | | |
|---|---|---|
| ದೇಶ | | |
| ವಾರ್ಷಿಕ | ₹ | 250-00 |
| ಅರ್ಧ ವಾರ್ಷಿಕ | ₹ | 150-00 |
| ಬಿಡಿ ಪ್ರತಿ | ₹ | 10-00 |
| ಗಲ್ಫ್ ರಾಷ್ಟ್ರಗಳಿಗೆ | | |
| ವಾರ್ಷಿಕ | ₹ | 2,000-00 |
| ಅರ್ಧ ವಾರ್ಷಿಕ | ₹ | 1,000-00 |

❖ ಸಂಪುಟ: 18 ❖ ಸಂಚಿಕೆ: 19 ❖ ಪುಟ: 12 ❖ ಅಕ್ಟೋಬರ್ 1-15, 2014 ❖ ಬೆಲೆ: ₹ 10/-

http://www.salafimangalore.org



## ಮಗನನ್ನು ಬಲಿಗೊಡಬೇಕಾಗಿಲ್ಲ! ಆಕಾಶದಿಂದ ಅಶರೀರವಾಣಿ: ಓ ಇಬ್ರಾಹೀಮ್, ನನ್ನ ಪರೀಕ್ಷೆಯಲ್ಲಿ ನೀನು ವಿಜೇತನಾಗಿರುವೆ...

ಅಬೂ ಆಯಿಶಾ

ಮುಸ್ಲಿಮರಾದ ನಮಗೆ ಅಲ್ಲಾಹು ಎರಡು ಹಬ್ಬಗಳನ್ನು ಮಾತ್ರವೇ ನಿಶ್ಚೈಸಿದ್ದಾನೆ. ಅದರಲ್ಲೊಂದು, ಪವಿತ್ರ ಹಜ್ಜ್ ಕರ್ಮದೊಂದಿಗೆ ಅನುಬಂಧಿಸಲ್ಪಟ್ಟು ದುಲ್‌ಹಿಜ್ಜ ತಿಂಗಳ ಹತ್ತರಂದು ಆಚರಿಸಲಾಗುವ ಈದುಲ್ ಅದ್‌ಹಾ. ಇಸ್ಲಾಮಿನ ಪಂಚ ಸ್ತಂಭಗಳಲ್ಲಿ ಐದನೇಯದಾದ ಪವಿತ್ರ ಹಜ್ಜ್ ಕರ್ಮಗಳ ಕಡೆಗೆ ಮತ್ತು ಅದರೊಂದಿಗೆ ಸಂಬಂಧಪಟ್ಟ ಆಚಾರ ವಿಧಿಗಳ ಕಡೆಗೆ ಕಣ್ಣೋಡಿಸಿ ನೋಡಿದರೆ ಖಲೀಲುಲ್ಲಾಹಿ ಇಬ್ರಾಹೀಮ್(ಅ), ಪತ್ನಿ ಹಾಜರಾ(ರ) ಮತ್ತು ಪುತ್ರ ಇಸ್ಮಾಯೀಲ್(ಅ)ರವರ ತ್ಯಾಗೋಜ್ವಲವಾದ ಬದುಕು ವಿಶ್ವ ಜನ ಸಮುದಾಯಕ್ಕೆ ಮಾದರೀಯೋಗ್ಯವಾದುದೆಂಬುದನ್ನು ಕಾಣಬಹುದಾಗಿದೆ. ಬಹಳಷ್ಟು ಪರೀಕ್ಷೆಗಳಿಗೆ ಅವರು ಗುರಿಯಾಗಿದ್ದರು. ಆ ಎಲ್ಲಾ ಪರೀಕ್ಷೆಗಳಲ್ಲೂ ಅವರು ಯಶಸ್ವಿಯಾಗಿದ್ದರು. ಪವಿತ್ರ ಕುರ್‌ಆನ್ ಹೀಗೆ ಪ್ರಸ್ತಾಪಿಸುತ್ತದೆ: "ಇಬ್ರಾಹೀಮರನ್ನು ಅವರ ಪ್ರಭು ಕೆಲವು ವಚನಗಳ ಮೂಲಕ ಪರೀಕ್ಷಿಸಿದ ಸಂದರ್ಭವನ್ನು ಸ್ಮರಿಸಿರಿ. ಹಾಗೆ ಅವನ್ನೆಲ್ಲಾ ಅವರು ಪೂರ್ತೀಕರಿಸಿದರು. ಅಲ್ಲಾಹು ಹೇಳುತ್ತಾನೆ - ನಾನಿದೋ ನಿಮ್ಮನ್ನು ಲೋಕ ಜನತೆಯ ನೇತಾರನಾಗಿ ಮಾಡಿರುತ್ತೇನೆ. ಅವರು (ಇಬ್ರಾಹೀಮರು) ಹೇಳಿದರು - ನನ್ನ ಸಂತತಿಗಳನ್ನೂ ನೀನು ನೇತಾರರನ್ನಾಗಿ ಮಾಡು. ಅವನು ಹೇಳಿದನು - ನನ್ನ ವಾಗ್ದಾನವು ಅಕ್ರಮಿಗಳಿಗೆ ಅನ್ವಯಿಸುವುದಿಲ್ಲ". (ಕುರ್‌ಆನ್ 2:124)

ಪ್ರವಾದಿ ಇಬ್ರಾಹೀಮ್(ಅ)ರವರು ಎದುರಿಸಬೇಕಾಗಿ ಬಂದ ಪ್ರಥಮ ಪರೀಕ್ಷೆ ತನ್ನ ಮನೆಯಿಂದಲೇ ಆಗಿತ್ತು. ಪ್ರವಾದಿತ್ವ ಲಭಿಸಿದೊಡನೆ ಅವರು ಸಂದೇಶ ಪ್ರಚಾರ ಆರಂಭಿಸಿದ್ದು ತನ್ನ ತಂದೆಯೊಂದಿಗಾಗಿತ್ತು. ತಂದೆ ಆಝರ್ ಒಬ್ಬ ವಿಗ್ರಹಾರಾಧಕ ಮಾತ್ರವೇ ಆಗಿರಲಿಲ್ಲ, ಮೂರ್ತಿಗಳನ್ನು ತಯಾರಿಸಿ ಮಾರಾಟ ಮಾಡುವ ದೇವತಾ ವ್ಯಾಪಾರಿಯಾಗಿದ್ದನು. ಮಾತ್ರವಲ್ಲ ದೇವಾಲಯದ ಅರ್ಚಕನೂ ಆಗಿದ್ದನು. ಆದ್ದರಿಂದಲೇ ಇಬ್ರಾಹೀಮ್(ಅ)ರವರು ಮೊತ್ತ ಮೊದಲು ತಂದೆಯನ್ನೇ ಸನ್ಮಾರ್ಗಕ್ಕೆ ತರುವ ಪ್ರಯತ್ನ ಕೈಗೊಂಡರು. ಅವರು ತಂದೆಯೊಡನೆ ಮಾಡಿದ ಉಪದೇಶ ಕುರ್‌ಆನಿನಲ್ಲಿ ಹೀಗೆ ಕಾಣಬಹುದು.

"ಅವರು ತನ್ನ ತಂದೆಯೊಡನೆ ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ). ಅಪ್ಪಾ, ಆಲಿಸಲಾಗದ, ನೋಡಲಾಗದ ಮತ್ತು ನಿಮಗೆ ಯಾವ ಕೆಲಸಕ್ಕೂ ಉಪಕರಿಸದಂತಹದನ್ನು(ವಿಗ್ರಹಗಳನ್ನು) ನೀವೇಕೆ ಆರಾಧಿಸುತ್ತೀರಿ? ಅಪ್ಪಾ, ನಿಮಗೆ ಬಂದಿರದಂತಹ ಕೆಲವು (ವಿಶೇಷ) ತಿಳುವಳಿಕೆಗಳು ನನಗೆ ಲಭಿಸಿವೆ. ಆದುದರಿಂದ ನನ್ನನ್ನು ನೀವು ಅನುಸರಿಸಿರಿ. ನಾನು ನಿಮಗೆ ನೇರವಾದ ಮಾರ್ಗವನ್ನು ತೋರಿಸಿ ಕೊಡುವೆನು. ಅಪ್ಪಾ, ನೀವು ಶೈತಾನನನ್ನು ಪೂಜಿಸಬೇಡಿರಿ. ನಿಜವಾಗಿಯೂ ಶೈತಾನನು ಸಮಗ್ರವಾಗಿ ದಯೆ ತೋರುವವನೊಂದಿಗೆ(ಅಲ್ಲಾಹನೊಂದಿಗೆ) ವಿಧೇಯತೆಯಿಲ್ಲದವನಾಗಿದ್ದಾನೆ. ಅಪ್ಪಾ, ಸಮಗ್ರವಾಗಿ ದಯೆ ತೋರುವವನ ಶಿಕ್ಷೆಯು ನಿಮಗೆ ಬಾಧಿಸಬಹುದೆಂದು ನಾನು ನಿಜವಾಗಿಯೂ ಭಯ ಪಡುತ್ತೇನೆ. ಹಾಗಾದಲ್ಲಿ ನೀವು ಶೈತಾನನಿಗೊಬ್ಬ ಮಿತ್ರನಾಗಿ ಬಿಡುವಿರಿ" (ಕುರ್‌ಆನ್ 19: 42-45).

ಅತ್ಯಂತ ಪ್ರೀತಿ ಹಾಗೂ ಗೌರವಾದರಗಳೊಂದಿಗೆ ಅವರು ಮಾಡಿದ ಉಪದೇಶವು ಆಝರನಲ್ಲಿ ಯಾವ ಪರಿಣಾಮವನ್ನೂ ಬೀರಲಿಲ್ಲ. ಮಾತ್ರವಲ್ಲ, ಆತ ಮಗನೊಂದಿಗೆ ಕಠಿಣವಾದ ರೀತಿಯಲ್ಲಿ ಪ್ರತಿಕ್ರಿಯಿಸುತ್ತಾನೆ. ಆದರೆ ತಂದೆಯ ಬೆದರಿಕೆಗೆ ಅವರು ಒಂದಿಷ್ಟೂ ಜಗ್ಗಲಿಲ್ಲ, ಹಿಂಜರಿಯಲೂ ಇಲ್ಲ. ಯಾರು ವಿರೋಧಿಸಿದರೂ ಅಲ್ಲಾಹು ತನಗೆ ವಹಿಸಿಕೊಟ್ಟಿರುವ ದೌತ್ಯದೊಂದಿಗೆ ಧೈರ್ಯವಾಗಿ ಮುಂದೆ ಸಾಗಲೆಂದೇ ಅವರು ತೀರ್ಮಾನಿಸಿದರು.

(2ನೇ ಪುಟಕ್ಕೆ)

## ಝಮ್ ಝಮ್



ಝಮ್‌ಝಮ್‌ಬಾವಿಯು 18x14 ಸುತ್ತಳತೆಯುಳ್ಳ ಮತ್ತು 13 ಮೀಟರ್ ಆಳವಿರುವ ಒಂದು ಚಿಕ್ಕ ಬಾವಿಯಾಗಿದೆ.

ಇಬ್ರಾಹೀಮ್(ಅ)ರವರು ಅಲ್ಲಾಹನ ಆಜ್ಞೆ ಪ್ರಕಾರ ತನ್ನ ಮಡದಿ ಹಾಜರಾ ಹಾಗೂ ಹಸುಗೂಸು ಇಸ್ಮಾಯೀಲ್‌ರವರನ್ನು ಬಿಟ್ಟು ಹೋದಾಗ ಅವರ ಬಳಿ ಒಂದು ಚಿಕ್ಕ ಚರ್ಮದ ಪಾತ್ರೆಯಲ್ಲಿ ಸ್ವಲ್ಪ ನೀರು ಮಾತ್ರವಿತ್ತು. ತನ್ನ ಬಳಿಯಲ್ಲಿದ್ದ ನೀರು ಮತ್ತು ಆಹಾರ ಮುಗಿದು ಬಿಸಿಲಿನ ತಾಪಕ್ಕೆ ಮೊಲೆಯುಣಿಸುವ ಮಗು ಹಾಗೂ ತಾಯಿ ಬಾಯಾರಿಕೆಯಿಂದ ಚಡಪಡಿಸುತ್ತಿದ್ದಾಗ ದೂರ ಪ್ರದೇಶದಿಂದ ಯಾರಾದರೂ ಏನಾದರೂ ಆಹಾರ ಅಥವಾ ನೀರು ತರಬಹುದೇ ಎಂದು ಸಫಾ ಮರ್‌ವಾ ಎಂಬ ಪರ್ವತವನ್ನು ಏಳು ಸಲ ಹತ್ತಿ ಇಳಿದರೂ ಒಂದು ನರಪಿಳ್ಳೆಯನ್ನೂ ಕಾಣಲು ಸಾಧ್ಯವಾಗಲಿಲ್ಲ. ಆ ಸಂದರ್ಭದಲ್ಲಿ ಅಲ್ಲಾಹನ ಸಮೀಪಸ್ಥರಾದ ಮಲಕ್ ಜಿಬ್‌ರೀಲ್(ಅ)ರವರು ತನ್ನ ರೆಕ್ಕೆಯನ್ನು ಭೂಮಿಗೆ ಬಡಿದಾಗ ಅದರಿಂದ ಹೊರಟ ನೀರಿನ ಒರತೆಯೇ ಝಮ್ ಝಮ್.

4000 ವರ್ಷ ಹಳೆಯದಾದ ಈ ಝಮ್ ಝಮ್ ನೀರು ಇದುವರೆಗೆ ಬತ್ತಿ ಹೋಗಲಿಲ್ಲ ಮತ್ತು ಅದರ ರುಚಿ ಬದಲಾಗಲಿಲ್ಲ. ಯಾವುದೇ ಪಾಮುಂಜಿ ಮರವಾಗಲೀ ಇತರ ಗಿಡಗಳಾಗಲೀ ಅದರೊಳಗೆ ಬೆಳೆಯದಿದ್ದುದರಿಂದ ಆ ನೀರು ಯಾವುದೇ ರೋಗಕ್ಕೆ ಕಾರಣವಾಗುವುದಿಲ್ಲ. ಇದು ಯುರೋಪ್ಯ ದೇಶದ ಲ್ಯಾಬ್‌ಗಳಲ್ಲಿ ಪರಿಶೀಲಿಸಿ ಕಂಡು ಹಿಡಿದ ಅಂಶವಾಗಿದೆ.

ಈ ಚಿಕ್ಕ ಬಾವಿಯಿಂದ ದಿನಂಪ್ರತಿ 2 ಮಿಲಿಯನ್ ಜನರು ನೀರು ಕುಡಿಯುತ್ತಾರೆ. ಒಂದು ಸೆಕುಂಡಿಗೆ 10,000 ಲೀ. ನೀರು ಪಂಪಿನ ಮುಖಾಂತರ ಮೇಲಕ್ಕೆತ್ತಲಾಗುತ್ತದೆ. ಗಂಟೆಗೆ 600ರಿಂದ 700 ಮಿಲಿಯನ್ ಲೀಟರ್ ನೀರು ತೆಗೆಯಲಾಗುತ್ತದೆ. ಒಂದು ಗಂಟೆ ನೀರು ತೆಗೆದರೆ 44 ಅಡಿಗಳಷ್ಟು ನೀರು ಕೆಳಗೆ ಇಳಿಯುತ್ತದೆ.

ಪ್ರತೀ ಗಂಟೆಗೊಮ್ಮೆ 4 ನಿಮಿಷಗಳಷ್ಟು ಸಮಯ ಮೋಟಾರ್ ಬಂದ್ ಮಾಡುವಾಗ ಪುನಃ ನೀರು ತನ್ನ ಮೊದಲಿನ ಮಟ್ಟಕ್ಕೆ ತಲುಪುತ್ತದೆ. ನೀರು ತುಂಬುವುದರಲ್ಲಿ ಎರಡು ವಿಶೇಷತೆ ಏನೆಂದರೆ ಒಂದು, ಎಷ್ಟು ಖಾಲಿಯಾಗುತ್ತದೋ ಅಷ್ಟೇ ನೀರು ತುಂಬುವುದು, ಎರಡನೆಯದು, ನೀರಿನ ಮಟ್ಟವು ಹೆಚ್ಚುವುದಿಲ್ಲ. ಒಂದು ವೇಳೆ ನೀರಿನ ಮಟ್ಟವು ಹೆಚ್ಚುತ್ತಿದ್ದರೆ ಪರಿಸರವೆಲ್ಲಾ ನೀರು ತುಂಬಿ ಜಲಾಶಯವಾಗುತ್ತಿತ್ತು.

ಝಮ್‌ಝಮ್ ನೀರಿನ ವಿಶೇಷತೆ ಏನೆಂದರೆ ಇದು ಇತರ ನೀರಿನಂತಲ್ಲ. ಇದರಲ್ಲಿರುವ ಪೌಷ್ಠಿಕಾಂಶವು ಆಹಾರ ಸೇವಿಸದೇ ಬರೀ ಈ ನೀರನ್ನು ಕುಡಿದೂ ನಮ್ಮ ಶರೀರಕ್ಕೆ ಅಗತ್ಯವಿರುವ ಶಕ್ತಿಯು ಸಾಕಾಗಬಹುದೆಂದು ವಿಜ್ಞಾನಿಗಳು ಕಂಡು ಹಿಡಿದಿದ್ದಾರೆ.

ಒಟ್ಟಿನಲ್ಲಿ ಈ ನೀರು ಅಲ್ಲಾಹನ ಒಂದು ದೃಷ್ಟಾಂತ ಹಾಗೂ ಅತಿಮಾನುಷಿಕತೆ ಎಂಬುದರಲ್ಲಿ ಎರಡು ಮಾತಿಲ್ಲ.



بِسْمِ اللهِ الرَّحْمٰنِ الرَّحِيْمِ

**ಸಂಪಾದಕೀಯ**

الحمد لله رب العالمين والصلاة والسلام على نبينا محمد وآله وصحبه أجمعين أما بعد

## ಇಸ್ಲಾಮನ್ನು ವಿಭಜಿಸಿದ ಘಾತುಕರು ಯಾರು?

ಇಸ್ಲಾಮಿನಲ್ಲಿ ಶಿಯಾ ಮತ್ತು ಸುನ್ನಿ ಎರಡು ವಿಭಾಗಗಳಿದ್ದು, ಸುನ್ನಿ ವಿಭಾಗದಲ್ಲಿ ಶಾಫಿ, ಹನಫಿ, ಮಾಲಿಕಿ, ಹಂಬಲಿ ಎಂಬ ನಾಲ್ಕು ಪಂಗಡಗಳಿವೆಯೆಂದು ಕರ್ನಾಟಕ ವಕ್ಫ್ ಬೋರ್ಡ್ ಪ್ರಕರಣವೊಂದರಲ್ಲಿ ಮೇಲ್ಮನವಿದಾರರಿಗೆ ಬರೆದ ಉತ್ತರದಲ್ಲಿ ತಿಳಿಸಿದೆ.

ಈ ರೀತಿ ವಿವಿಧ ಪಂಗಡಗಳಾಗಿ ಇಸ್ಲಾಮನ್ನು ವಿಭಜಿಸಿದವರು ಯಾರು? ಇಸ್ಲಾಮಿನ ಮೂಲ ಪ್ರಮಾಣಗಳು ಎರಡೇ ಎರಡು. ಒಂದನೇಯದು ಅಲ್ಲಾಹನ ಗ್ರಂಥವಾದ ಪವಿತ್ರ ಕುರ್‌ಆನ್, ಎರಡನೆಯದು. ಪ್ರವಾದಿ ಮುಹಮ್ಮದ್(ಸ)ರವರ ಹದೀಸ್‌ಗಳು ಅಥವಾ ಸುನ್ನಃ ಪ್ರವಾದಿ ಮುಹಮ್ಮದ್(ಸ)ರವರು ಹಜ್ಜತ್ತುಲ್ ವಿದಾಅಕ್‌ನಲ್ಲಿ ಮಾಡಿದ ತನ್ನ ಅಂತಿಮ ಪ್ರವಚನದಲ್ಲಿ ಹೇಳಿದ್ದೇನೆಂದರೆ "ನಾನು ನಿಮಗೆ ಎರಡು ವಸ್ತುಗಳನ್ನು ಬಿಟ್ಟು ಹೋಗುತ್ತಿದ್ದೇನೆ. ಒಂದು ಅಲ್ಲಾಹನ ಗ್ರಂಥವಾದ ಕುರ್‌ಆನ್ ಇನ್ನೊಂದು ನನ್ನ ಸುನ್ನತ್. ಇವೆರಡನ್ನು ನೀವು ಬಿಗಿಯಾಗಿ ಹಿಡಿದರೆ ನೀವು ದಾರಿ ತಪ್ಪಲಾರಿರಿ" ಎಂಬುದಾಗಿತ್ತು. ಅಲ್ಲಾಹನ ರಸೂಲ್(ಸ)ರು ಹೇಳಿದ ಈ ಎರಡು ವಸ್ತುಗಳೇ ಇಸ್ಲಾಮಿನ ಮೂಲ ಪ್ರಮಾಣ. ಈ ಎರಡು ಪ್ರಮಾಣಗಳನ್ನು ಕೈಬಿಟ್ಟರೆ ನೀವು ದಾರಿ ತಪ್ಪುತ್ತೀರಿ. ಅಂದರೆ ಇಸ್ಲಾಮಿನಿಂದ ಹೊರ ಹೋಗುತ್ತೀರಿ ಎಂದಾಗಿದೆ ರಸೂಲ್(ಸ)ರವರು ತನ್ನ ವಿದಾಯ ಭಾಷಣದಲ್ಲಿ ನೀಡಿದ ಎಚ್ಚರಿಕೆ.

ಶಿಯಾಗಳು ಅಲ್ಲಾಹನ ಗ್ರಂಥವಾದ ಪವಿತ್ರ ಕುರ್‌ಆನನ್ನು ತಮಗೆ ಬೇಕಾದಂತೆ ತಿರುಚಿ, ಆಯತ್‌ಗಳನ್ನು ದುರ್ವ್ಯಾಖ್ಯಾನಿಸಿ ಕುರ್‌ಆನನ್ನು ವಿರೂಪಗೊಳಿಸುವ ಮೂಲಕ ಗೋರಿ ಪೂಜಾ ಸಂಪ್ರದಾಯವನ್ನು ಇಸ್ಲಾಮಿನೊಳಗೆ ತುರುಕಿ ಅಲ್ಲಾಹನನ್ನು ಮಾತ್ರ ಆರಾಧಿಸಬೇಕಾಗಿದ್ದ ಮುಸ್ಲಿಮರನ್ನು ಕಬರ್ ಪೂಜಕರಾಗಿ ಪರಿವರ್ತಿಸಿದ್ದು ಮಾತ್ರವಲ್ಲ ಪ್ರಮುಖ ಸಹಾಬಿಗಳನ್ನು ನಿಕೃಷ್ಟವಾಗಿ ನಿಂದಿಸಿದ ಪಥಭ್ರಷ್ಟ ವಿಭಾಗದವರಾಗಿದ್ದಾರೆ. ಕುರ್‌ಆನ್ ಹಾಗೂ ಸುನ್ನತ್‌ಗಳನ್ನು ಬಿಗಿಯಾಗಿ ಹಿಡಿದು ಪ್ರವಾದಿ(ಸ)ರು ಸಹಾಬಿಗಳು ಪವಿತ್ರ ಸಲಫುಸ್ಸಾಲಿಹುಗಳ ಮಾದರಿ ಅನುಸರಿಸಿ ಜೀವಿಸುವ ನೈಜ ಸತ್ಯವಿಶ್ವಾಸಿಗಳು ಶಿಯಾಗಳ ಇಸ್ಲಾಮೇತರ ಆದರ್ಶಗಳಿಗೆದುರಾಗಿ ಅಹ್ಲುಸುನ್ನಃ ವಲ್ ಜಮಾಅಃ ಎಂಬ ಹೆಸರಲ್ಲಿ ಗುರುತಿಸಲ್ಪಟ್ಟರು. ಅಹ್ಲುಸುನ್ನಃ ವಲ್‌ಜಮಾಅಃದ ಆದರ್ಶವನ್ನೇ ಪ್ರತಿಪಾದಿಸುತ್ತಾ ಇಸ್ಲಾಮೀ ಜಗತ್ತಿನಲ್ಲಿ ಅಪಾರ ಸೇವೆ ಗೈದ ಮಹಾನ್ ವಿದ್ವಾಂಸರಾದ ಶಾಫಿಈ, ಹನಫಿ, ಮಾಲಿಕ್ ಮತ್ತು ಹಂಬಲ್ ಎಂಬೀ ನಾಲ್ವರು ಇಮಾಮರುಗಳು ಕುರ್‌ಆನ್, ಹದೀಸ್‌ಗಳ ಬೆಳಕಲ್ಲಿ ಹಲವಾರು ಉತ್ಕೃಷ್ಟ ಗ್ರಂಥಗಳನ್ನು ರಚಿಸಿದ್ದು, "ನಮ್ಮ ಗ್ರಂಥಗಳಲ್ಲಿ ಉಲ್ಲೇಖಿಸಲಾಗಿರುವ ನಮ್ಮ ಅಭಿಪ್ರಾಯಗಳು ಪ್ರವಾದಿ(ಸ)ರ ಹದೀಸ್‌ಗಳಿಗೆ ವಿರುದ್ಧವಾಗಿದ್ದರೆ ನಮ್ಮ ಅಭಿಪ್ರಾಯಗಳನ್ನು ತಿರಸ್ಕರಿಸಿ ಪ್ರವಾದಿ(ಸ)ರವರ ಹದೀಸ್‌ಗಳನ್ನು ಸ್ವೀಕರಿಸಬೇಕು" ಎಂದು ಆ ನಾಲ್ಕು ಮಂದಿ ಇಮಾಮರುಗಳು ತಮ್ಮ ಗ್ರಂಥಗಳಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾರೆ. ಆದರೆ ಜನರು ಕುರ್‌ಆನನ್ನೂ ಹದೀಸ್‌ಗಳನ್ನೂ ಕಡೆಗಣಿಸಿ ಇಮಾಮರ ಸ್ವಂತ ಅಭಿಪ್ರಾಯಗಳನ್ನು ಸ್ವೀಕರಿಸಿ ಇಮಾಮರನ್ನು ತಕ್ಲೀದ್ ಮಾಡುವ ನಾಲ್ಕು ಪಂಗಡಗಳಾಗಿ ವಿಭಜಿಸಲ್ಪಟ್ಟರು. ಇಮಾಮ್ ಶಾಫಿಈ(ರ)ರನ್ನು ತಕ್ಲೀದ್ ಮಾಡುವವರು ಶಾಫಿಗಳೆಂದೂ ಇಮಾಮ್ ಅಬೂಹನೀಫರನ್ನು ತಕ್ಲೀದ್ ಮಾಡುವವರು ಹನಫಿಗಳೆಂದೂ ಇಮಾಮ್ ಮಾಲಿಕ್(ರ)ರನ್ನು ತಕ್ಲೀದ್ ಮಾಡುವವರು ಮಾಲಿಕಿಗಳೆಂದೂ, ಇಮಾಮ್ ಅಹ್ಮದುಬ್‌ನು ಹಂಬಲ್(ರ)ರನ್ನು ತಕ್ಲೀದ್ ಮಾಡುವವರು ಹಂಬಲಿಗಳೆಂದೂ ತಮ್ಮನ್ನು ತಾವೇ ಘೋಷಿಸಿಕೊಂಡರು. ಈ ನಾಲ್ಕು ತಕ್ಲೀದಿ ಗುಂಪುಗಳನ್ನು ಮದ್‌ಹಬ್‌ಗಳೆಂದು ಹೆಸರಿಟ್ಟು ಪರಸ್ಪರ ಕಚ್ಚಾಡ ತೊಡಗಿದರು. ಈ ಮದ್‌ಹಬೀ ಭೇದಗಳು ಇಂದು ಸಹ ಮುಸ್ಲಿಮ್ ಸಮಾಜದಲ್ಲಿ ಅಸ್ತಿತ್ವದಲ್ಲಿದ್ದು, ಒಂದು ಮದ್‌ಹಬ್‌ನವರು ಇನ್ನೊಂದು ಮದ್‌ಹಬ್‌ನವರೊಂದಿಗೆ ವಿವಾಹ ಸಂಬಂಧ ಮಾಡಿಕೊಳ್ಳುವುದಿಲ್ಲ. ಮದ್‌ಹಬೀ ಆಧಾರಿತ ಮಸೀದಿಗಳನ್ನು ಕಟ್ಟಿಕೊಂಡು ಪ್ರವಾದಿ(ಸ)ರ ಸುನ್ನತ್‌ಗೆ ವಿರುದ್ಧವಾಗಿ ವಿಭಿನ್ನ ರೀತಿಯ ಮದ್‌ಹಬೀ ನಮಾಝ್ ನಿರ್ವಹಿಸುತ್ತಿರುವುದನ್ನು ಕಾಣಬಹುದಾಗಿದೆ. ನಾನು ಯಾವ ರೀತಿ ನಮಾಝ್ ನಿರ್ವಹಿಸಿದ್ದೇನೋ ಅದೇ ರೀತಿ ನೀವೂ ನಮಾಝ್ ನಿರ್ವಹಿಸಬೇಕೆಂದು ಹೇಳಿದ ಪ್ರವಾದಿ(ಸ)ರ ಮಾತನ್ನು ತೃಣ ಸಮಾನವಾಗಿ ಮಾಡಿರುವ ಈ ಮಂದಿಯ ಮದ್‌ಹಬೀ ಪ್ರೇಮ ಎಷ್ಟು ಗಾಢವಾಗಿ ಬೆಳೆದಿದೆಯೆಂದರೆ ನಿಜವಾದ ಮುಸ್ಲಿಮ್ ಆಗಬೇಕಿದ್ದರೆ ಯಾವುದಾದರೊಂದು ಮದ್‌ಹಬ್‌ನ್ನು ಸ್ವೀಕರಿಸಲೇಬೇಕೆಂದು ಇವರ ಮುಲ್ಲಾ-ಮೌಲಾನಾಗಳು ಫತ್ವ ಹೊರಡಿಸಿದ್ದಾರೆ.

ಅಲ್ಲಾಹನ ಕುರ್‌ಆನ್ ಮತ್ತು ನನ್ನ ಸುನ್ನತ್‌ಗಳನ್ನು ಬಿಗಿಯಾಗಿ ಹಿಡಿದರೆ ನೀವು ದಾರಿ ತಪ್ಪಲಾರಿರಿ ಎಂದು ತಾಕೀದು ನೀಡಿದ ಮಾನವ ಸಮೂಹದ ಮಾರ್ಗದರ್ಶಕ ಪ್ರವಾದಿ ಮುಹಮ್ಮದ್(ಸ)ರ ಸ್ಪಷ್ಟೋಕ್ತಿಯನ್ನು ಕಾಲಡಿಗೆ ಹಾಕಿ ವಿವಿಧ ಇಮಾಮರುಗಳ ವಿಭಿನ್ನ ಅಭಿಪ್ರಾಯಗಳನ್ನು ಬಿಗಿ ಹಿಡಿದು ಇಸ್ಲಾಮನ್ನು ವಿಭಿನ್ನ ಪಂಗಡಗಳಾಗಿ ವಿಭಜಿಸಿದ ಘಾತುಕರು ಸೃಷ್ಟಿಸಿಕೊಂಡಿರುವ ಮದ್‌ಹಬ್‌ಗಳಿಗೂ ಇಸ್ಲಾಮಿಗೂ ಯಾವುದೇ ಸಂಬಂಧವಿಲ್ಲ. ಮುಸ್ಲಿಮ್ ಆಗಬೇಕಿದ್ದರೆ ಯಾವುದಾದರೊಂದು ಮದ್‌ಹಬ್‌ನ್ನು ಸ್ವೀಕರಿಸಲೇಬೇಕೆಂದು ವಾದಿಸುವ ವಿಭಜನವಾದಿಗಳು ತಮ್ಮ ವಾದವನ್ನು ಕುರ್‌ಆನ್ ಹಾಗೂ ಸಹೀ ಹದೀಸ್‌ಗಳ ಆಧಾರದಲ್ಲಿ ಸಮರ್ಥಿಸಲಿ.

ಇವರ ವಾದ ಸರಿಯೆಂದಾದರೆ ಅಖಿಲ ಲೋಕಕ್ಕೆ ಅನುಗ್ರಹೀತರಾಗಿ ನಿಯೋಗಿಸಲ್ಪಟ್ಟ ರಸೂಲ್(ಸ) ಮತ್ತು ಅವರ ಲಕ್ಷಾಂತರ ಸಹಾಬಿಗಳು ಯಾವ ಮದ್‌ಹಬ್‌ನವರೆಂದು ಸ್ಪಷ್ಟ ಪಡಿಸಲಿ. ಇಸ್ಲಾಮಿನಲ್ಲಿ ಇಂತಹ ವರ್ಗಭೇದವನ್ನು ಸೃಷ್ಟಿಸಿದ ಮದ್‌ಹಬಿ ಪಕ್ಷಪಾತವನ್ನು ಕೊನೆಗಾಣಿಸಿ ಸಮಸ್ತ ಮುಸ್ಲಿಮರ ಐಕ್ಯತೆಗೆ ಹಾದಿ ತೋರಿಸಿದ ಮಹಾನ್ ಪ್ರವಾದಿ ಮುಹಮ್ಮದ್(ಸ)ರವರ ಮದ್‌ಹಬ್‌ಗೆ ಮರಳಲು ಮುಸ್ಲಿಮ್ ಜಗತ್ತು ಮುಂದಾಗಲಿ. ಕರ್ನಾಟಕ ವಕ್ಫ್ ಬೋರ್ಡ್ ಈ ವಾಸ್ತವವನ್ನು ಮನಗಾಣಲಿ.

## ಮಗನನ್ನು ಬಲಿಗೊಡಬೇಕಾಗಿಲ್ಲ! ಆಕಾಶದಿಂದ ಅಶರೀರವಾಣಿ...

(ಒಂದನೇ ಪುಟದಿಂದ)

ತಂದೆಯ ಮೇಲಿನ ಗೌರವವನ್ನು ಉಳಿಸಿಕೊಂಡೇ ಅವರು ಈ ರೀತಿ ಹೇಳುತ್ತಾರೆ: "ನಿಶ್ಚಯವಾಗಿಯೂ ಅವನು ನನ್ನೊಂದಿಗೆ ಬಹಳಷ್ಟು ದಯೆಯುಳ್ಳವನಾಗಿದ್ದಾನೆ. ನಾನು ನಿಮ್ಮನ್ನು ಮತ್ತು ಅಲ್ಲಾಹನ ಹೊರತು ನೀವು ಕರೆದು ಪ್ರಾರ್ಥಿಸುತ್ತಿರುವವುಗಳನ್ನು ಬಿಟ್ಟು ಹೋಗುತ್ತಿದ್ದೇನೆ ಮತ್ತು ನಾನು ನನ್ನ ಪ್ರಭುವನ್ನು ಮಾತ್ರ ಪ್ರಾರ್ಥಿಸುವೆನು. ನನ್ನ ಪ್ರಭುವನ್ನು ಪ್ರಾರ್ಥಿಸಿದ್ದರಲ್ಲಿ ನಾನು ನಿರಾಶನಾಗಲಾರೆ" ಎಂದರು. (ಕುರ್‌ಆನ್ 19: 47, 48).

ಆದರ್ಶ ಸಂರಕ್ಷಣೆಗಾಗಿ ಅಗತ್ಯ ಬಿದ್ದರೆ ಮಾತಾಪಿತರನ್ನೂ ತ್ಯಜಿಸಬೇಕಾಗುತ್ತದೆಯೆಂಬ ಪಾಠವನ್ನು ಇಬ್ರಾಹೀಮ್(ಅ)ರವರ ಇತಿಹಾಸ ನಮಗೆ ಕಲಿಸಿಕೊಡುತ್ತದೆ. ಸ್ವಾರ್ಥಕ್ಕಾಗಿ ಪವಿತ್ರವಾದ ಆದರ್ಶವನ್ನೇ ಹಾಳು ಮಾಡಿದ ಧರ್ಮಭ್ರಷ್ಟ ಪಂಡಿತರನ್ನು ತಕ್‌ಲೀದ್ ಮಾಡುವವರು ಆದರ್ಶ ಸಂರಕ್ಷಣೆಗಾಗಿ ಜನ್ಮಕೊಟ್ಟ ತಂದೆಯವನ್ನೂ ಹುಟ್ಟಿ ಬೆಳೆದ ಮನೆಯನ್ನೂ ಬಿಟ್ಟು ಹೋದ ಇಬ್ರಾಹೀವ್(ಅ)ರವರ ತ್ಯಾಗಭರಿತ ಬದುಕಿನಿಂದ ಪಾಠ ಕಲಿಯಲಿ.

ಮನೆಯಿಂದ ಹೊರಟು ಬಂದ ಇಬ್ರಾಹೀವ್(ಅ) ಜನರೆಡೆಗೆ ತೆರಳಿ ತೌಹೀದ್ ಹೇಳಲು ಮುಂದಾದರು. ತನ್ನ ತವರು ನಾಡಾದ ಇಕರಾಕಿಗಳು ಸಂಪೂರ್ಣವಾಗಿ ಬಹುದೇವ ವಿಶ್ವಾಸಿಗಳಾಗಿದ್ದರು. ಎಲ್ಲಿ ನೋಡಿದರೂ ವಿಗ್ರಹಾಲಯಗಳು. ಅಲ್ಲಿನ ರಾಜನಾದ ನಮ್ರೂದನು ಬಹು ದೇವಾರಾಧನೆಯ ಸಕಲ ವಿಶ್ವಾಸಾಚಾರಗಳನ್ನು ಪ್ರೋತ್ಸಾಹಿಸುವ ತೌಹೀದ್‌ನ ಕಠಿಣ ಶತ್ರುವಾಗಿದ್ದನು. ವಿಗ್ರಹಾರಾಧನೆಯ ನಿರರ್ಥಕತೆಯನ್ನು ಉಪದೇಶಿಸಿದರೆ ಮಾತ್ರ ಸಾಲದು, ಕ್ರಿಯಾತ್ಮಕವಾಗಿ ತೋರಿಸಿಕೊಟ್ಟರೆ ಮಾತ್ರವೇ ಅವರಿಗೆ ಮನವರಿಕೆಯಾದೀತೆಂದು ಭಾವಿಸಿದ ಇಬ್ರಾಹೀವ್(ಅ) ಅಂತಹ ಸಂದರ್ಭಕ್ಕಾಗಿ ಕಾದಿದ್ದರು. ಊರವರು ದೂರದ ಜಾತ್ರೆಗೆಂದು ಹೋದಂದು ಹತ್ತಿರದ ವಿಗ್ರಹಾಲಯದಲ್ಲಿ ಯಾರೂ ಇರಲಿಲ್ಲ. ಇದುವೇ ಸರಿಯಾದ ಸಮಯವೆಂದೆನಿಸಿದ ಇಬ್ರಾಹೀಮ್(ಅ) ಕೊಡಲಿಯೊಂದನ್ನು ಎತ್ತಿಕೊಂಡು ವಿಗ್ರಹಾಲಯದೊಳಗೆ ನುಗ್ಗಿದರು. ಅದರೊಳಗೆ ಒಂದು ದೊಡ್ಡ ವಿಗ್ರಹ ಮತ್ತು ಸುತ್ತಲೂ ಮರಿ ವಿಗ್ರಹಗಳನ್ನು ಪ್ರತಿಷ್ಠಾಪಿಸಲಾಗಿತ್ತು. ದೊಡ್ಡ ವಿಗ್ರಹವೊಂದನ್ನು ಬಿಟ್ಟು ಉಳಿದುದೆಲ್ಲವನ್ನೂ ಕಡಿದು ಹಾಕಿ ಕೊಡಲಿಯನ್ನು ದೊಡ್ಡ ವಿಗ್ರಹದ ಕುತ್ತಿಗೆಗೆ ಕಟ್ಟಿ ಅವರು ಹೊರಟು ಹೋದರು. ಜಾತ್ರೆ ಮುಗಿದು ಊರಿಗೆ ತಲುಪಿದ ಜನರು ಪ್ರಭಾತದ ಪೂಜೆಗಾಗಿ ಮಂದಿರದೊಳಗೆ ಪ್ರವೇಶಿಸಿದಾಗ ಅಚ್ಚರಿ ಕಾದಿತ್ತು.

ತಮ್ಮ ದೇವರುಗಳ ದುರಾವಸ್ಥೆಯನ್ನು ಕಂಡ ಜನರು "ನಮ್ಮ ದೇವರುಗಳನ್ನು ಈ ರೀತಿ ಮಾಡಿದವರು ಯಾರು? ಯಾರೇ ಆದರೂ ಅವರನ್ನು ಬಿಡಬಾರದು, ಅವರಿಗೆ ಕಠಿಣ ಶಿಕ್ಷೆ ನೀಡಬೇಕು" ಎಂದು ಆಗ್ರಹಿಸಿದರು. ಅಷ್ಟರಲ್ಲಿ ಒಬ್ಬಾತ ಮುಂದೆ ಬಂದು ಇಬ್ರಾಹೀಮ್ ಎಂಬ ಒಬ್ಬ ಯುವಕನು ನಮ್ಮ ದೇವರುಗಳನ್ನು ಆಕ್ಷೇಪಿಸುತ್ತಿದ್ದುದನ್ನು ನಾನು ಕೇಳಿದ್ದೇನೆ, ಅವನೇ ಮಾಡಿರಬೇಕು ಈ ಕೆಲಸ" ಎದನು. ಹಾಗಿದ್ದರೆ ಅವನನ್ನು ಹಿಡಿಯಬೇಕು ಎನ್ನುತ್ತಾ ಜನರು ಇಬ್ರಾಹೀಮ್(ಅ)ರನ್ನು ಹುಡುಕಾಡ ತೊಡಗಿದರು. ಹೆಚ್ಚು ತಡ ಮಾಡದೆ ಇಬ್ರಾಹೀಮ್(ಅ)ರನ್ನು ಹಾಜರುಗೊಳಿಸಲಾಯಿತು. ಅವರೊಡನೆ ಹೀಗೆ ಕೇಳಲಾಯಿತು: "ನೀನೆಯೋ ಈ ಕ್ರೂರ ಕೃತ್ಯವೆಸಗಿದ್ದು?" ಹೌದೆಂದಾಗಲಿ, ಅಲ್ಲವೆಂದಾಗಲಿ ಹೇಳದೆ ಇಬ್ರಾಹೀವ್(ಅ)ರವರು "ಅದು ಆ ದೊಡ್ಡವನ ಕೆಲಸವಾಗಿರಬಹುದು. ಆ ದೊಡ್ಡ ದೇವನು ಯಾವ ಹಾನಿಯೂ ತಟ್ಟದೆ ಇದನ್ನೆಲ್ಲಾ ನೋಡುತ್ತಾ ನಿಂತಿದ್ದಾನಲ್ಲಾ. ಅವನೊಡನೆ ಕೇಳಿ ನೋಡಿರಿ" ಎಂದುತ್ತರಿಸಿದರು. ಇದನ್ನು ಕೇಳಿದಾಗ ಅವರಲ್ಲಿ ಕೆಲವರು ಹೇಳಿದರು: "ಅವುಗಳಿಗೆ ಮಾತನಾಡಲು ಆಗುವುದಿಲ್ಲವೆಂದು ನಿನಗೆ ತಿಳಿಯದೇ? "ಹಾಗಿದ್ದರೆ ಆಲಿಸಲಿಕ್ಕಾಗಿ, ನೋಡಲಿಕ್ಕಾಗಿ, ಮಾತನಾಡಲಿಕ್ಕಾಗಿ ಸಾಧ್ಯವಾಗದ ಇವುಗಳನ್ನು ನೀವು ಪೂಜಿಸುವುದೇ? ಇದೆಂತಹ ಮೂರ್ಖತನ!" ಇಬ್ರಾಹೀಮರ ಪ್ರತಿಕ್ರಿಯೆಯನ್ನು ಕೇಳಿದ ಆ ವಿಗ್ರಹ ಪೂಜಕರಿಗೆ ಇದು ಸರಿಯಲ್ಲವೇ ಎಂದು ತೋರಿತು. ಆದರೆ ಆ ಚಿಂತನೆ ಅವರ ಮನಸ್ಸುಗಳಲ್ಲಿ ಹೆಚ್ಚು ಸಮಯ ಉಳಿಯಲಿಲ್ಲ. ಅವರ ತಲೆ ನೆಟ್ಟಗಾಗಿ ಮತ್ತೆ ತಮ್ಮ ಹಿಂದಿನ ಸಂಪ್ರದಾಯಕ್ಕೇ ಶರಣಾದರು. ಆಕ್ರೋಶಭರಿತರಾದ ಅವರು "ಸುಟ್ಟು ಹಾಕಿರಿ ಅವನನ್ನು, ನಿಮಗೇನಾದರೂ ಮಾಡಲು ಸಾಧ್ಯವಾಗುವುದಾದರೆ ಆ ಮೂಲಕ ನಿಮ್ಮ ದೇವರುಗಳಿಗೆ ಸಹಾಯ ಮಾಡಿರಿ" ಎಂದರು. ಜನರ ಆಗ್ರಹವನ್ನು ಅಂಗೀಕರಿಸಿದ ನಮ್ರೂದನ ಕೋರ್ಟ್ ಇಬ್ರಾಹೀವ್(ಅ)ರನ್ನು ಬೆಂಕಿಗೆ ಹಾಕಿ ಸುಡುವಂತೆ ಆದೇಶಿಸಿತು. ಇಬ್ರಾಹೀವ್(ಅ) ಒಂದಿಷ್ಟೂ ಎದೆಗುಂದಲಿಲ್ಲ. ತಾನು ಅಲ್ಲಾಹನ ಮಾರ್ಗದಲ್ಲಿದ್ದೇನೆ. ತನಗೆ ಅವನು ಸಹಾಯ ಮಾಡುವನು. ಸರ್ವಸ್ವವನ್ನೂ ಅಲ್ಲಾಹನಿಗೆ ಸಮರ್ಪಿಸಿ ಅವನಲ್ಲೇ ಸಂಪೂರ್ಣ ಭರವಸೆಯಿಟ್ಟು ಅವರು ಅಚಂಚಲರಾಗಿ ನಿಂತರು. ಸ್ವಲ್ಪವೂ ಕಾಲಾವಕಾಶ ನೀಡದೆ ಉಗ್ರ ಜ್ವಾಲೆಗಳನ್ನು ಹೊರಸೂಸುತ್ತಾ ದಗದಗನೆ ಉರಿಯುವ ಅಗ್ನಿ ಕುಂಡಕ್ಕೆ ಆ ಮಹಾನ್ ಪ್ರವಾದಿಯನ್ನು ಎಸೆಯಲಾಯಿತು. ಆದರೆ ಅಲ್ಲಾಹು ಅವರನ್ನು ರಕ್ಷಿಸಿದನು. ಒಂದು ಕೂದಲು ಸಹಾ ಕರಟಿ ಹೋಗದೆ ಆ ಅಗ್ನಿ ಕುಂಡದಿಂದ ಅವರು ಹೊರ ಬಂದರು. ಅಲ್ ಹಮ್ದುಲಿಲ್ಲಾಹ್.

(7ನೇ ಪುಟಕ್ಕೆ)

# ಮಾನವ ಸೃಷ್ಟಿಯ ಉದ್ದೇಶವೇನು?

ನಮ್ಮ ಜೀವನದ ಒಂದು ಕಠೋರ ಸತ್ಯವೆಂದರೆ ನಾವು ಇಂದು ಬದುಕಿದ್ದೇವೆ ಮತ್ತು ಒಂದು ದಿನ ನಾವು ಸಾಯಲೇಬೇಕು. ಆದರೆ ನಾವು ಇಲ್ಲಿ ಏಕೆ ಅಸ್ತಿತ್ವದಲ್ಲಿದ್ದೇವೆಂದು ಎಂದಾದರೂ ಯೋಚಿಸಿದ್ದೇವೆಯೇ?

ನಮ್ಮ ಸುತ್ತಮುತ್ತಲಿರುವ ಎಲ್ಲಾ ವಸ್ತುಗಳನ್ನು ಕೆಲಕಾಲ ವೀಕ್ಷಿಸೋಣ. ನಾವು ನಮ್ಮಿಂದಲೇ ಸೃಷ್ಟಿಸಲ್ಪಟ್ಟ ಹಲವು ವಸ್ತುಗಳಿಂದ ನಾವು ಸುತ್ತುವರಿಯಲ್ಪಟ್ಟಿದ್ದೇವೆ. ನಾವು ಆ ವಸ್ತುಗಳನ್ನು ಏತಕ್ಕಾಗಿ ಸೃಷ್ಟಿಸಿದ್ದೇವೆ? ಅವುಗಳ ಸೃಷ್ಟಿಗೆ ಉದ್ದೇಶವೇನಾದರೂ ಇದೆಯೇ? ಉತ್ತರವು ಸ್ಪಷ್ಟವಾಗಿದೆ, ಹೌದು! ಎಲ್ಲಾ ವಸ್ತುಗಳೂ ಉದ್ದೇಶಪೂರ್ವಕವಾಗಿಯೇ ಸೃಷ್ಟಿಸಲ್ಪಟ್ಟಿವೆ. ನಮ್ಮ ದೇಹದಲ್ಲಿರುವ ಯಾವುದೇ ಅಂಗಾಂಗವನ್ನು ಗಮನಿಸಿ. ಅವುಗಳಲ್ಲಿ ಯಾವುದಾದರೂ ಅಂಗವು ಉದ್ದೇಶ ರಹಿತವಾಗಿ ಸೃಷ್ಟಿಸಿರುವುದು ನಮಗೆ ಕಂಡು ಬರುತ್ತದೆಯೇ? ಇಲ್ಲ! ಹಾಗಾದರೆ, ಭೂಮಿಯ ಮೇಲೆ ನಮ್ಮ ಅಸ್ತಿತ್ವಕ್ಕೆ ಉದ್ದೇಶ ವಿಲ್ಲವೆಂದು ನಾವು ಹೇಗೆ ಒಪ್ಪಿಕೊಳ್ಳಬಹುದು? ವಿವೇಕವಂತರು ಮನುಷ್ಯನ ಸೃಷ್ಟಿಯ ಉದ್ದೇಶವನ್ನು ಎಂದೂ ಅಲ್ಲಗಳೆಯಲಾರರು.

ನಾವು ಏಕೆ ಸೃಷ್ಟಿಸಲ್ಪಟ್ಟಿದ್ದೇವೆ? ಖ್ಯಾತಿ ಮತ್ತು ಐಶ್ವರ್ಯ ಗಳಿಸುವುದಕ್ಕಾಗಿಯೇ? ವಿನೋದಕ್ಕಾಗಿಯೇ? ಅತ್ಯಂತ ಶ್ರೀಮಂತನಾಗಲು...? ಇಲ್ಲ! ಇವೆಲ್ಲಕ್ಕೂ ಮಿಗಿಲಾಗಿ ಈ ಜೀವನಕ್ಕೆ ಒಂದು ಸುಸ್ಪಷ್ಟ ಉದ್ದೇಶವಿದೆ. ಬನ್ನಿ, ಒಂದು ಕ್ಷಣ ಈ ವಿಷಯದ ಕುರಿತು ಚಿಂತಿಸೋಣ.

ಜಗತ್ತಿನಲ್ಲಿ ನಮ್ಮ ಅಸ್ತಿತ್ವದ ಉದ್ದೇಶವನ್ನು ನಿರ್ಧರಿಸುವವರು ಯಾರು? ನಾವೇ ಸ್ವತಃ ನಮ್ಮ ಜೀವನದ ಉದ್ದೇಶವನ್ನು ನಿರ್ಧರಿಸುತ್ತೇವೆಂದು ನೀವು ಉತ್ತರಿಸಬಹುದು. ಆದರೆ ನಮ್ಮ ಜೀವನದ ಗುರಿಯನ್ನು ನಾವು ನಿರ್ಧರಿಸಬಹುದೇ ಹೊರತು ಉದ್ದೇಶವನ್ನಲ್ಲ.

ಇದನ್ನು ನಾವು ಒಂದು ಪೆನ್ನಿನ (ಲೇಖನಿಯ) ಉದಾಹರಣೆಯೊಂದಿಗೆ ತಿಳಿಯೋಣ. ಪೆನ್ನನ್ನು ರಚಿಸಿರುವುದರ ಹಿಂದಿರುವ ಉದ್ದೇಶವೇನು? ಬರವಣಿಗೆಗೆ ಉಪಯುಕ್ತವಾಗಲೆಂದು ಪೆನ್ನನ್ನು ರಚಿಸಲಾಯಿತು ಎಂಬುವುದು ಸಾರ್ವತ್ರಿಕ ಸತ್ಯ. ಇದರ ಉದ್ದೇಶವನ್ನು ನಿರ್ಧರಿಸಿದವರಾರು? ಯಾರು ಪೆನ್ನನ್ನು ಮೊಟ್ಟಮೊದಲು ನಿರ್ಮಿಸಿದರೋ ಅವರೇ ಇದರ ಉದ್ದೇಶವನ್ನೂ ನಮಗೆ ತಿಳಿಸಿದರು ಎಂಬುವುದು ಇದರ ಉತ್ತರವಾಗಿದೆ. ಈಗ ಒಬ್ಬನು ಇದೇ ಪೆನ್ನನ್ನು ತುರಿಸಲು ಉಪಯೋಗಿಸಿದನು ಎಂಬ ಮಾತ್ರಕ್ಕೆ ಪೆನ್ನಿನ ಮೂಲ ಉದ್ದೇಶವು ಬೆನ್ನನ್ನು ತುರಿಸುವುದು ಎಂದು ತೀರ್ಮಾನಿಸಲು ಸಾಧ್ಯವೇ? ಇದರಿಂದ ಪೆನ್ನಿನ ನೈಜ ಉಪಯೋಗವನ್ನು ಅದರ ನಿರ್ಮಾಪಕನಿಗೆ ಮಾತ್ರ ನಿರ್ಧರಿಸಲು ಸಾಧ್ಯ ಎಂದು ನಾವು ತಿಳಿಯಬಹುದು. ಇದೇ ರೀತಿ ಮಾನವಕೋಟಿಯು ತನ್ನ ಅಸ್ತಿತ್ವಕ್ಕೆ ತನ್ನದೇ ಆದ ವಿವಿಧ ಬಗೆಯ ಕಾರಣಗಳನ್ನು ಮುಂದಿಡಬಹುದೇ ಹೊರತು ಅದರ ನೈಜ ಉದ್ದೇಶವನ್ನು ಕಂಡುಕೊಳ್ಳುವುದು ಸುಲಭ ಸಾಧ್ಯವಲ್ಲ. ನಮ್ಮ ಜೀವನದ ನೈಜ ಉದ್ದೇಶವನ್ನು ಸರ್ವಶಕ್ತನಾದ ಸೃಷ್ಟಿಕರ್ತನಿಗೆ ಮಾತ್ರ ನಿರ್ಧರಿಸಲು ಸಾಧ್ಯ.

**ನಮಗೊಬ್ಬ 'ಸೃಷ್ಟಿಕರ್ತ'ನಿದ್ದಾನೆಯೇ? ಅಥವಾ (Evolution) ನಮ್ಮ ಅಸ್ತಿತ್ವಕ್ಕೆ ವಿಕಸನ ಸಿದ್ಧಾಂತವು ಕಾರಣವಾಯಿತೇ?**

ನಾವು ಒಂದು ಸೇತುವೆಯನ್ನು ಅಥವಾ ಯಂತ್ರವನ್ನು ನೋಡಿದಾಗ, ಅದರ ಹಿಂದೆ ಒಬ್ಬ ಸೃಷ್ಟಿಕರ್ತನ ಅಥವಾ ಒಂದು ಸಂಸ್ಥೆಯ ಇರುವಿಕೆಯನ್ನು ನಾವು ನಿರಾಕರಿಸಲಾರೆವು. ಹಾಗಾದರೆ ಅತ್ಯುತ್ತಮವಾದ ವಿನ್ಯಾಸ, ಶಿಸ್ತು ಮತ್ತು ರಚನೆಯನ್ನು ಹೊಂದಿರುವ ಈ ವಿಶ್ವದ ಬಗ್ಗೆ ನೀವೇನು ಹೇಳುವಿರಿ?

ಉದಾಹರಣೆಗಾಗಿ ಮುಂದಿನ 200 ವರ್ಷಗಳ ಸೂರ್ಯೋದಯ, ಸೂರ್ಯಾಸ್ತ, ಸೂರ್ಯಗ್ರಹಣ ಮತ್ತು ಚಂದ್ರಗ್ರಹಣಗಳ ಸಮಯವನ್ನು ನಿಖರವಾಗಿ ಹಾಗೂ ಮುಂಚಿತವಾಗಿಯೇ ತಿಳಿಯಬಹುದಾಗಿದೆ. ಇದು ವಿಶ್ವ ಮಂಡಲದಲ್ಲಿ ತೇಲುತ್ತಿರುವ ಸಹಸ್ರ ಗ್ರಹ-ನಕ್ಷತ್ರಗಳ ನಡುವಿನ ಬಂಧ, ಸಮತೋಲನವನ್ನು ಸಾರುತ್ತದೆ. ವಿಶ್ವದ ಅತ್ಯುತ್ತಮ ರಚನೆಗೆ ಇದೊಂದು ಅದ್ಭುತವಾದ ಉದಾಹರಣೆಯಾಗಿದೆ.

ವಿವಿಧ ಬಣ್ಣಗಳನ್ನು ಗೋಡೆಯೊಂದಕ್ಕೆ ಅವ್ಯವಸ್ಥಿತವಾಗಿ ಸಿಂಪಡಿಸಿದಾಗ ಮನೆ ಅಥವಾ ಪಕ್ಷಿಯೊಂದರ ಆಕೃತಿಯು ರಚನೆಯಾಗಲು ಸಾಧ್ಯವಿಲ್ಲ. ಈ ವಿಶ್ವವು ಮೋನಾಲಿಸಾಳ ಆಕೃತಿಯ ರಚನೆಯಾಗಲು ಸಾಧ್ಯವಿಲ್ಲ. ಈ ವಿಶ್ವವು ಮೋನಾಲಿಸಾಳ ಆಕೃತಿಗಿಂತ ಎಷ್ಟೋ ಪಟ್ಟು ಕ್ಲಿಷ್ಟಕರವಾಗಿದೆ. ಹಾಗಾದರೆ ಈ ವಿಶ್ವದ ರಚನೆಯು ಒಬ್ಬ ಸೃಷ್ಟಿಕರ್ತನಿಲ್ಲದೇ ಅಸ್ತಿತ್ವಕ್ಕೆ ಬಂದಿದೆ ಎಂಬ ವಿಶ್ವಾಸ ಹೊಂದುವುದು ಹೇಗೆ ಸಾಧ್ಯ?

ನಮಗೆಲ್ಲರಿಗೂ ಗೊತ್ತಿರುವ ಹಾಗೆ ಒಂದು ಸ್ಫೋಟದಿಂದ ಕೇವಲ ವಿನಾಶವಾಗುತ್ತದೆ, ಹಾಗಾದರೆ ಈ ಸುಂದರವಾದ ಮತ್ತು ಪರಿಪೂರ್ಣವಾದ ರಚನೆಯು ಕೇವಲ ಒಂದು 'ಬಿಗ್ ಬ್ಯಾಂಗ್'ನಂತಹ ಮಹಾ ಸ್ಫೋಟದಿಂದ ಉದ್ಭವಿಸಿದ್ದೇ? ಒಂದು ವೇಳೆ ಮರ್‌ಸಿಡೀಸ್ ಬೆಂಚ್ ಮತ್ತು ರೋಲ್ಸರೊಯ್ಸ್ ಕಾರುಗಳು ಒಂದು ನಿರುಪಯುಕ್ತ ವಸ್ತು ಸಂಗ್ರಹದ(Julk yard) ಸ್ಫೋಟದಿಂದ ಉದ್ಭವಿಸಿದವು ಎಂದು ಹೇಳಿದರೆ ನೀವು ನಂಬುವಿರಾ?

**ದೇವನು ವಿಶ್ವವನ್ನು ಸೃಷ್ಟಿಸಿದ್ದಾನೆ ಎಂದಾದರೆ ಅವನನ್ನು ಸೃಷ್ಟಿಸಿದವರು ಯಾರು?**

ವಿಶ್ವ ವಿಜ್ಞಾನದ (ಕಾಸ್ಮೋಲಜಿ - ವಿಶ್ವದ ರಹಸ್ಯಗಳನ್ನು ವಿಶ್ಲೇಷಿಸುವ ವಿಜ್ಞಾನ) ಪ್ರಕಾರ ಈ ವಿಶ್ವಕ್ಕೆ ಒಂದು ಪ್ರಾರಂಭವಿತ್ತು ಮತ್ತು ಈ ವಿಶ್ವದ ಪ್ರಾರಂಭದೊಂದಿಗೆ ಕಾಲವೆಂಬ ಮಾನದಂಡವೂ ಅಸ್ತಿತ್ವಕ್ಕೆ ಬಂತು. ಇದರಿಂದ ಒಂದು ವಸ್ತು ಅಥವಾ ಜೀವಿಯ ಪ್ರಾರಂಭ (ಹುಟ್ಟು) ಮತ್ತು ಅಂತ್ಯವನ್ನು(ಸಾವು) ನಿರ್ಧರಿಸಬಹುದು. ಈ ವಿಶ್ವದಲ್ಲಿ ಸೃಷ್ಟಿಸಲ್ಪಟ್ಟ ಎಲ್ಲಾ ವಸ್ತುಗಳು 'ಸಮಯ'ಕ್ಕೆ ಅವಲಂಬಿತವಾಗಿವೆ. ಆ ಕಾರಣದಿಂದಲೇ ಅವುಗಳಿಗೆ ಪ್ರಾರಂಭ ಮತ್ತು ಅಂತ್ಯವಿದೆ. ಆದರೆ ಯಾರು ಸಮಯವನ್ನು ಸೃಷ್ಟಿಸಿದನೋ ಅವನು ಈ ಸಮಯ (ಕಾಲ)ದ ಜಾಲದಿಂದ ಮುಕ್ತನಾಗಿದ್ದಾನೆ. ಅವನೇ ಸೃಷ್ಟಿಕರ್ತನಾಗಿದ್ದಾನೆ. ಹಾಗಾಗಿ ಸೃಷ್ಟಿಕರ್ತನಿಗೆ ಪ್ರಾರಂಭ ಮತ್ತು ಅಂತ್ಯವಿಲ್ಲ ಮತ್ತು ಅವನು ಆದಿ ಕಾಲದಿಂದಲೂ ಅಸ್ತಿತ್ವದಲ್ಲಿಯೇ ಇದ್ದಾನೆ. ಉದಾಹರಣೆಗೆ ಒಂದು ವೇಳೆ ಒಬ್ಬ ನಿರ್ಮಾತೃ ಅಥವಾ ಲೇಖಕನ ಅವಶ್ಯಕತೆ ಇರುತ್ತಿರಲಿಲ್ಲ. ಹಾಗೇ, ದೇವನು ಸದಾಕಾಲ ಅಸ್ತಿತ್ವದಲ್ಲಿ ಇದ್ದುದರಿಂದ ಅವನಿಗೆ ಯಾರೂ ಸೃಷ್ಟಿಕರ್ತನಿಲ್ಲ.

**'ದೇವನು ಮಾನವ ಕುಲಕ್ಕೆ ತನ್ನ ಕಡೆಯಿಂದ ಮಾರ್ಗದರ್ಶನ ಮಾಡಿರುವನೇ?**

ದೇವನು ನಮ್ಮನ್ನು ಸೃಷ್ಟಿಸಿ ಮಾರ್ಗದರ್ಶನ ಮಾಡದೆ ಹಾಗೆಯೇ ಬಿಡಲಿಲ್ಲ. ನೀವು ಕಾರನ್ನು ಓಡಿಸುವುದು ಹೇಗೆ ಎಂದು ತೋರಿಸಬೇಕಿದ್ದರೆ ಕಾರನ್ನೇ ಬಳಸುತ್ತೀರಿ ಹೊರತು ಬೈಕನ್ನಲ್ಲ. ಹಾಗೆಯೇ, ದೇವನು ಉತ್ತಮ ಮನುಷ್ಯರನ್ನೇ ಆಯ್ಕೆ ಮಾಡಿ ಅವರ ಮೂಲಕ ಇತರ ಮನುಷ್ಯರಿಗೆ ಉತ್ತಮ ಜೀವನ ಹೇಗೆ ನಡೆಸಬೇಕೆಂದು ತಿಳಿಸಿಕೊಟ್ಟನು. ಅವರೇ ದೇವನು ಕಳುಹಿಸಿದ ಪ್ರವಾದಿಗಳು. ಎಲ್ಲಾ ಪ್ರವಾದಿಗಳು ನಮ್ಮಂತೆ ಮಾನವರೇ ಆಗಿದ್ದರು ವಿನಃ ಅವರಿಗೆ ಯಾವುದೇ ದೈವಿಕ ಶಕ್ತಿಯಿರಲಿಲ್ಲ. ಸಂಸ್ಕೃತದಲ್ಲಿ ಅವರಿಗೆ 'ಮಹರ್ಷಿ'ಗಳೆನ್ನುವರು. ಅವರು ಸಮಾಜದಲ್ಲಿ ಮಾದರಿ ವ್ಯಕ್ತಿಗಳಾಗಿ, ಮಾನವ ಕುಲದ ನಾಯಕರಾಗಿ ಇತಿಹಾಸದಲ್ಲಿ ಜೀವಿಸಿದ್ದರು.

ಭಾರತವೂ ಸೇರಿದಂತೆ ಭೂಮುಖದ ಎಲ್ಲಾ ಪ್ರದೇಶಗಳಿಗೆ ಆಯಾ ಕಾಲದಲ್ಲಿ, ಆಯಾ ನಿರ್ದಿಷ್ಟ ಸಮುದಾಯಕ್ಕೆ ಸಂದೇಶ ವಾಹಕರುಗಳನ್ನು ಕಳುಹಿಸಲಾಗಿತ್ತು.

ಪ್ರವಾದಿ ನೂಹ್, ಅಬ್ರಹಾಮ್, ಮೋಸೆಸ್, ಡೇವಿಡ್, ಸೊಲಮನ್, ಯೇಸು (ಇವರೆಲ್ಲರ ಮೇಲೆ ಶಾಂತಿಯಿರಲಿ) ಈ ಎಲ್ಲಾ ಹೆಸರುಗಳು ವಿವಿಧ ಕಾಲ ಘಟ್ಟಗಳಲ್ಲಿ ಈ ಭೂಮಿಗೆ ಆಗಮಿಸಿದ ಸಂದೇಶ ವಾಹಕರುಗಳ ಕೆಲವು ಹೆಸರುಗಳಾಗಿವೆ. ಹೀಗೆ ಈ ಜಗತ್ತಿಗೆ ಅಂತಿಮ ಪ್ರವಾದಿಯಾಗಿ ಸೃಷ್ಟಿಕರ್ತನಿಂದ ನೇಮಿಸಲ್ಪಟ್ಟವರೇ ಪ್ರವಾದಿ ಮುಹಮ್ಮದ್ (ಇವರ ಮೇಲೆ ಶಾಂತಿಯಿರಲಿ). ಈ ಹಿಂದೆ ಕಳುಹಿಸಲ್ಪಟ್ಟ ಎಲ್ಲಾ ಪ್ರವಾದಿಗಳೂ ನಿರ್ದಿಷ್ಟ ಕಾಲದಲ್ಲಿ ನಿರ್ದಿಷ್ಟ ಸಮುದಾಯಕ್ಕೆ ಮಾತ್ರ ಸೀಮಿತವಾದ ಸಂದೇಶವನ್ನು ತಂದಿದ್ದರು. ಆದರೆ ಅಂತ್ಯ ಪ್ರವಾದಿ ಮುಹಮ್ಮದ್(ಇವರ ಮೇಲೆ ಶಾಂತಿಯಿರಲಿ). ಸಕಲ ಮಾನವ ಕುಲಕ್ಕೆ ಮಾರ್ಗದರ್ಶಕರಾಗಿ ಈ ಜಗತ್ತಿಗೆ ಆಗಮಿಸಿದರು ಮತ್ತು ಅವರ ಸಂದೇಶವು, ಈ ಭೂಮಿಯು ಅಸ್ತಿತ್ವದಲ್ಲಿರುವ ವರೆಗೆ ಎಲ್ಲರಿಗೂ ಅನ್ವಯಿಸುವುದು.

ಪ್ರವಾದಿ ಮುಹಮ್ಮದ್(ಸ) ಯಾವುದೇ ನವೀನ ಧರ್ಮ ಅಥವಾ ಸಂದೇಶವನ್ನು ತಂದಿಲ್ಲ. ಬದಲಾಗಿ ಅವರು ಈ ಹಿಂದಿನ ಪ್ರವಾದಿಗಳು ಜನರ ಮುಂದಿಟ್ಟಿದ್ದ ಸಂದೇಶಕ್ಕೆ ಕೇವಲ ಮರುಜೀವವನ್ನಷ್ಟೇ ನೀಡಿದರು.

**ಪ್ರವಾದಿ(ಸಂದೇಶವಾಹಕರು)ಗಳ ಬೋಧನೆಗಳೇನು?**

'ಸೃಷ್ಟಿಕರ್ತ'ನಿಂದ ಈ ಭೂಮಿಗೆ ಕಳುಹಿಸಲ್ಪಟ್ಟ ಎಲ್ಲಾ ಪ್ರವಾದಿಗಳ ಸಂದೇಶದ ಸಾರಾಂಶವನ್ನು ಈ ಕೆಳಗಿನಂತೆ ಪಟ್ಟಿ ಮಾಡಬಹುದು.

1. ನಮ್ಮ ಜೀವನದ ಉದ್ದೇಶ
2. ದೇವನ ಗುಣಲಕ್ಷಣಗಳು.
3. ಈ ಭೂಮಿಯಲ್ಲಿ ನಾವೆಸಗುವ ಪ್ರತಿಯೊಂದು ಕರ್ಮ(ಕ್ರಿಯೆ)ಕ್ಕೂ ಸೃಷ್ಟಿಕರ್ತನ ಮುಂದೆ ಲೆಕ್ಕ ಒಪ್ಪಿಸಲೇಬೇಕಾಗುವುದು.

**ನಮ್ಮ ಜೀವನದ ಉದ್ದೇಶ?**

ನಮ್ಮ ಜೀವನದ ಉದ್ದೇಶವು ಸೃಷ್ಟಿಕರ್ತನನ್ನು ಮಾತ್ರ ಆರಾಧಿಸುವುದಾಗಿದೆ. ಅವನನ್ನು ಹೊರತುಪಡಿಸಿ ಬೇರೆ ಯಾರನ್ನೂ ಆರಾಧಿಸಬೇಡಿ. (ಸೃಷ್ಟಿಕರ್ತನನ್ನು ಆರಾಧಿಸಿ ಅವನ ಸೃಷ್ಟಿಗಳಾದ ಸೂರ್ಯ, ಚಂದ್ರ, ಆಕಾಶ-ಭೂಮಿ, ನೀರು, ವಾಯು, ಮೂರ್ತಿ-ಚಿತ್ರ, ವಿಗ್ರಹ ಇತ್ಯಾದಿಗಳನ್ನು ಆರಾಧಿಸಬೇಡಿ. ಯಾವ ವಸ್ತುವನ್ನೂ, ಯಾವ ಜೀವಿಯನ್ನೂ ದೇವನ ಸ್ಥಾನಕ್ಕೇರಿಸಬೇಡಿ ಮತ್ತು ಅವನ ಇರುವಿಕೆ ಯನ್ನು ನಿರಾಕರಿಸಬೇಡಿ).

**'ದೇವ'ನ ಗುಣ ಲಕ್ಷಣಗಳೇನು?**

1. ದೇವನು ಏಕೈಕನು ಮತ್ತು ಅವನಿಗೆ ಸರಿಸಮಾನರು ಯಾರೂ ಇಲ್ಲ.
2. ಅವನು ನಿರಪೇಕ್ಷನು ಅಂದರೆ ಅವನು ಆಹಾರ, ನಿದ್ರೆ ಕುಟುಂಬ, ಮಡದಿ, ಮಕ್ಕಳು ಮುಂತಾದ ಎಲ್ಲಾ ಬೇಡಿಕೆಗಳಿಂದ ಮುಕ್ತನಾಗಿದ್ದಾನೆ. ಆದ್ದರಿಂದ ದೇವನು ನಿದ್ರಿಸುವುದಿಲ್ಲ, ಭೋಜನ ಮಾಡುವುದಿಲ್ಲ, ಮಾತಾಪಿತರಾಗಲಿ, (5ನೇ ಪುಟಕ್ಕೆ)

# ಪ್ರವಾದಿ ಮುಹಮ್ಮದ್(ಸ)ರ ವಿವಾಹಗಳು

ಮೂಲ: ಮುಹಮ್ಮದ್ ಅಮಾನಿ ಮೌಲವಿ
ಕನ್ನಡಕ್ಕೆ ಇಸ್ಮಾಯೀಲ್ ಶಾಫಿ

## ಇತರ ವಿವಾಹಗಳ ಸಾಮಾನ್ಯ ಕಾರಣಗಳು

ಸೂರಾಃ ಅಹ್‌ಝಾಬ್‌ನ 50, 51ನೇ ವಚನಗಳ ತಾತ್ಪರ್ಯವನ್ನು ಮನದಟ್ಟು ಮಾಡುವ, ಅಲ್ಲಾಹು, ಪ್ರವಾದಿ(ಸ) ಮತ್ತು ಕುರ್‌ಆನನ್ನು ಅಂಗೀಕರಿಸುವ ಯಾರಿಗೇ ಆದರೂ ಪ್ರವಾದಿ(ಸ) ರು ಹೆಚ್ಚು ಪತ್ನಿಯರನ್ನು ಹೊಂದಿರುವುದರ ಕುರಿತು ಯಾವುದೇ ಸಂಶಯ ಉಂಟಾಗಲಾ ರದು. ಪ್ರವಾದಿ(ಸ)ರಿಗೆ ಅಲ್ಲಾಹು ಸ್ಪಷ್ಟವಾದ ಭಾಷೆಯಲ್ಲಿ - ಧರ್ಮಬದ್ಧ ಗೊಳಿಸಿದುದರ ವಿನಾ ಬೇರೇನನ್ನೂ ಅವರು ಸ್ವ-ಇಚ್ಛೆಯಿಂದ ಮಾಡಿದ್ದಿಲ್ಲವೆಂದು ಖಂಡಿತವಾಗಿ ಹೇಳಬಹುದು. ಅಲ್ಲಾಹು ಧರ್ಮಬದ್ಧಗೊಳಿಸಿದ ವಿಷಯದಲ್ಲಿ ವಿಚಾರಣೆ ನಡೆಸಲು ಯಾರಿಗೂ ಅಧಿಕಾರ ಅಥವಾ ಹಕ್ಕಿರುವುದಿಲ್ಲ. ಅವನ ಅಪ್ಪಣೆಯಲ್ಲಿ ಅಡಗಿರುವ ರಹಸ್ಯಗಳ ಕುರಿತು ಪೂರ್ಣವಾಗಿ ತಿಳಿದುಕೊಳ್ಳಲು ನಮಗೆ ಸಾಧ್ಯ ವಿಲ್ಲ. ಅನ್ವೇಷಣೆ ಮಾತ್ರವೇ ಮಾಡಬೇಕಾಗಿದೆ. ಪ್ರವಾದಿ(ಸ)ರಿಗೆ ಮಾತ್ರ ಪ್ರತ್ಯೇಕವಾಗಿ ಹೆಚ್ಚು ಪತ್ನಿಯರನ್ನು ಅನುಮತಿಸಿದ್ದರಲ್ಲಿ ಅಡಗಿರುವ ಕೆಲವು ರಹಸ್ಯಗಳು ಈ ಕೆಳಗಿನಂತಿವೆ:

1. ಇಸ್ಲಾಮ್ ಬರೇ ಕೆಲವು ವಿಶ್ವಾಸಾಚಾರಗಳು ಮಾತ್ರ ಅಡಗಿರುವ ಧರ್ಮವಲ್ಲ. ಮಾನವ ಜೀವನದ ಸರ್ವರಂಗಗಳನ್ನು ಸ್ಪರ್ಶಿಸುವ ಅತಿ ವಿಶಾಲವೂ ವಿಪುಲವೂ ಆದ ಒಂದು ನಿಯಮ ಸಂಹಿತೆಯಾಗಿದೆ ಇಸ್ಲಾಮ್. ಪ್ರವಾದಿ(ಸ)ರ ಜೀವನ ಚರ್ಯೆಗಳು ಅದರ ಪ್ರಾಯೋಗಿಕ ಮಾದರಿಯಾಗಿದೆ. ಅವರ ಸಂದೇಶವು ಕಾಲ, ದೇಶ, ಭಾಷೆಗಳ ವ್ಯತ್ಯಾಸವಿಲ್ಲದೆ ಲೋಕಾಂತ್ಯದವರೆಗೂ ಇರುವಂತಹದ್ದಾಗಿದೆ. ಮಾತ್ರವಲ್ಲ, ಮನುಷ್ಯ ವರ್ಗದ ಅರ್ಧ ಭಾಗ ಅಥವಾ ಅದಕ್ಕಿಂತ ಹೆಚ್ಚಿರುವ ಸ್ತ್ರೀ ಸಮೂಹವನ್ನು ಪ್ರತ್ಯೇಕವಾಗಿ ಸ್ಪರ್ಶಿಸುವ ನಿಯಮ ನಿರ್ದೇಶಗಳು ಮತ್ತು ಕ್ರಮ ನಿಬಂಧನೆಗಳು ಇಸ್ಲಾಮಿನಲ್ಲಿದೆ. ಅದೇ ರೀತಿ ವೈಯಕ್ತಿಕ, ವೈವಾಹಿಕ, ಕೌಟುಂಬಿಕ ಮುಂತಾದ ಬದುಕಿನ ಸರ್ವರಂಗಗಳಲ್ಲೂ ಮುಸ್ಲಿಮರು ಪ್ರವಾದಿ(ಸ)ರನ್ನು ಮಾದರಿಯಾಗಿ ಮಾಡಲೇಬೇಕಾಗಿದೆ. ಸ್ತ್ರೀಯರ ಮೂಲಕ ಅಂದರೆ ಪತ್ನಿಯರ ಮೂಲಕವಲ್ಲದೆ ತಿಳಿದುಕೊಳ್ಳಲು ಮತ್ತು ತಿಳಿಸಲ್ಪಡಲು ಬೇರೆ ವ್ಯವಸ್ಥೆಗಳಿಲ್ಲದ ಹಲವಾರು ವಿಷಯಗಳು ಇದರಲ್ಲಿ ಒಳ ಪಡುತ್ತವೆಯೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಧರ್ಮನಿಷ್ಠವಾದ ಕೌಟುಂಬಿಕ ಜೀವನ ಮತ್ತು ಪತಿ-ಪತ್ನಿಯರ ಖಾಸಗಿ ವಿಚಾರಗಳ ಕುರಿತು ಮುಸ್ಲಿಮ್ ಸಮು ದಾಯಕ್ಕೆ ತಿಳಿಯಲು ಸಾಧ್ಯವಾದದ್ದು ಪ್ರವಾದಿ(ಸ)ರ ಪತ್ನಿಯರ ಮೂಲಕ ವಿಶೇಷವಾಗಿ ಆಯಿಶಾ(ರ) ಮೂಲಕವಾಗಿದೆ.

ಮುಶ್ರಿಕರ ಪೈಕಿ ಒಬ್ಬನು ಅಪಹಾಸ್ಯ ಮಾಡಿ ಹೀಗೆ ಹೇಳುತ್ತಾನೆ: "ನಿಮ್ಮ ಜನ-ಪ್ರವಾದಿ(ಸ) -ನಿಮಗೆ ಮಲಮೂತ್ರ ವಿಸರ್ಜನೆ ಮಾಡುವುದು ಹೇಗೆಂದು ಸಹ ಕಲಿಸಿ ಕೊಟ್ಟಿರುವುದಾಗಿ ಕಾಣುತ್ತಿದೆಯಲ್ಲಾ" ಇದನ್ನು ಕೇಳಿದ ಸಲ್ಮಾನ್(ರ) ರವರು ಅಭಿಮಾನದೊಂದಿಗೆ ಹೇಳುತ್ತಾರೆ: ಹೌದು, (ಮಲಮೂತ್ರ ವಿಸರ್ಜನೆಯ ಸಮಯದಲ್ಲಿ) ಖಿಬ್ಲಾಕ್ಕೆ ನೇರವಾಗಿ ಕುಳಿತುಕೊಳ್ಳಬಾರದು, ಬಲಗೈಯಲ್ಲಿ ಶುದ್ಧಿಗೊಳಿಸಬಾರದು, (ಕಲ್ಲಿನಿಂದ ಶುದ್ಧಿ ಮಾಡುವಾಗ) ಮೂರು ಕಲ್ಲುಗಳಿಗಿಂತ ಕಡಿಮೆಯಿರಬಾರದು, ಅದರಲ್ಲಿ ಮಲ ಮೂತ್ರ ಮಾಲಿನ್ಯಗಳಿರಬಾರದು ಎಂದೆಲ್ಲಾ ಅವರು(ಸ) ನಮಗೆ ಕಲಿಸಿಕೊಟ್ಟಿದ್ದಾರೆ" (ಅಹ್ಮದ್, ಮುಸ್ಲಿಮ್). ಇಷ್ಟು ಚಿಕ್ಕ ವಿಷಯಗಳಲ್ಲಿ ಕೂಡಾ ಸಮುದಾಯಕ್ಕೆ ಪ್ರವಾದಿ(ಸ)ರಿಂದ ಮಾದರಿಯಿದೆಯೆಂದರ್ಥ. ಇವೆಲ್ಲಾ ಪುರುಷರ ಮೂಲಕ ಪರಸ್ಪರ ತಿಳಿದುಕೊಳ್ಳುವಂತಹದ್ದಾಗಿದ್ದರೂ ಇಂತಹ ಇತರ ಅನೇಕ ವಿಷಯಗಳು ಸ್ತ್ರೀಯರ ಮೂಲಕ ತಿಳಿಯಬೇಕಾಗಿದೆ. ಆರ್ತವದ ಸಮಯಗಳಲ್ಲಿ ಮನೆ ಕೆಲಸಗಳಲ್ಲಿ ಮತ್ತು ಗಂಡಂದಿರ ವಿಷಯಗಳಲ್ಲಿ ಸ್ತ್ರೀಯರು ಹೇಗೆ ವರ್ತಿಸಬೇಕು? ಅದರ ಅವಧಿ ಮುಗಿದಾಗ ಶುದ್ಧೀಕರಿಸುವುದು ಹೇಗೆ? ಮುಂತಾದವುಗಳೆಲ್ಲಾ ಇದರ ಉದಾಹರಣೆಗಳಾಗಿವೆ. ಹಾಗಾಗಿ ಇಂತಹ ಹಲವಾರು ಪ್ರಮುಖ ಅವಶ್ಯಕತೆಗಳನ್ನು ನೆರವೇರಿಸುವ ಉದ್ದೇಶಗಳಿಗಾಗಿ ಪ್ರವಾದಿ(ಸ)ರು ಒಂದಕ್ಕಿಂತ ಹೆಚ್ಚು ವಿವಾಹವಾಗಬೇಕಾದ ಅನಿವಾರ್ಯತೆಯಿತ್ತೆಂಬುದನ್ನು ತಿಳಿದುಕೊಳ್ಳಬಹುದಾಗಿದೆ.

2. ಪ್ರವಾದಿತ್ವ ಲಭಿಸಿದ ಬಳಿಕ ಪ್ರವಾದಿ(ಸ)ರು ಮಕ್ಕಾದಲ್ಲಿದ್ದ ಪ್ರಾರಂಭ ಘಟ್ಟದಲ್ಲಿ ಅವರ ಪ್ರಮುಖ ಬೋಧನಾ ವಿಷಯ ಇಸ್ಲಾಮಿನ ಮೂಲ ಸಿದ್ಧಾಂತಗಳಾಗಿದ್ದವು. ಅದರ ಪ್ರಚಾರದಲ್ಲಿ ಸ್ತ್ರೀ-ಪುರುಷರೆಂಬ ಭೇದವಿಲ್ಲದೆ ಎಲ್ಲಾ ಮುಸ್ಲಿಮರು ತಮ್ಮ ಸಾಮರ್ಥ್ಯವನ್ನು ವಿನಿಯೋಗಿಸಿದ್ದರು. ಆ ಬಳಿಕ ಮದೀನಾಕ್ಕೆ ಬಂದಾಗ ಮೂಲ ಸಿದ್ಧಾಂತಗಳ ಹೊರತಾದ ಆಚಾರ, ಅನುಷ್ಠಾನ, ಕರ್ಮಗಳ ವಿಶದ ನಿಯಮ-ನಿರ್ದೇಶಗಳು ಬೋಧನಾ ವಿಷಯಗಳಾಗಿದ್ದವು. ಅಂದು ಧಾರ್ಮಿಕ ವಿಷಯಗಳನ್ನು ಕಲಿಸಲು ಮತ್ತು ಪ್ರಚಾರ ಮಾಡಲು ಈಗಿರುವಂತಹ ಯಾವುದೇ ಶಿಕ್ಷಣ ಸಂಸ್ಥೆಗಳಿರಲಿಲ್ಲ.

ಅಂದಿನ ಏಕೈಕ ಧಾರ್ಮಿಕ ವಿದ್ಯಾಲಯವೆಂದರೆ ಮದೀನಾ ಮಸೀದಿಯ ಜಗಲಿಯಾಗಿತ್ತು. ಆ ವಿದ್ಯಾಲಯದ ವಿದ್ಯಾರ್ಥಿಗಳಾಗಿದ್ದವರು ಯಾರೆಂದರೆ, ದಟ್ಟ ದರಿದ್ರರು, ವಾಸಕ್ಕೆ ಮನೆ ಕೂಡಾ ಇಲ್ಲದ ಕೆಲವು ಬಡವರು. ಅಂದರೆ ಮುಸ್ಲಿಮ್ ಜಗತ್ತಿನ ಉನ್ನತ ನೇತಾರರೂ ಸತ್ಯವಿಶ್ವಾಸಿಗಳ ಮಾದರೀ ಪುರುಷರೂ ಆಗಿದ್ದ ಅಬೂಹುರೈರ(ರ), ಅಮ್ಮಾರ್(ರ), ಬಿಲಾಲ್(ರ), ಸುಹೈಬ್(ರ), ಸಲ್ಮಾನ್(ರ) ಮುಂತಾದ ಮಹಾನುಭಾವರಾಗಿದ್ದರು. ಅದೇ ಸಮಯದಲ್ಲಿ ಮುಸ್ಲಿಮ್ ಮಹಿಳೆಯರಿಗಾಗಿ ನಡೆಸಲ್ಪಡುತ್ತಿದ್ದ ಕೆಲವು ಖಾಸಗಿ ಮಹಿಳಾ ವಿದ್ಯಾಲಯಗಳು ಮದೀನದಲ್ಲಿದ್ದವು. ಮದೀನಾ ಮಸೀದಿಯ ಪರಿಸರಗಳಲ್ಲಿ ಅತ್ತಿತ್ತ ಕಾಣಲ್ಪಡುತ್ತಿದ್ದ ಖರ್ಜೂರದ ಮಡಲಿನ ಗುಡಿಸಲುಗಳಲ್ಲಿ ವಾಸಿಸುತ್ತಿದ್ದ ಪ್ರವಾದಿ(ಸ)ರ ಪತ್ನಿಯರು ಅಧ್ಯಾಪಕಿಯರಾಗಿ ತಂತಮ್ಮ ಗುಡಿಸಲುಗಳಲ್ಲಿ ಮಹಿಳೆಯರಿಗೆ ಧಾರ್ಮಿಕ ಶಿಕ್ಷಣ ನೀಡುತ್ತಿದ್ದರು. ಅವರಲ್ಲಿ ಕೆಲವರು ಹೆಸರಿಗೆ ಮಾತ್ರ ಪ್ರವಾದಿ(ಸ)ರ ಪತ್ನಿಯರೆಂಬ ಭಾಗ್ಯದಿಂದ ತೃಪ್ತಿಗೊಂಡು ಇಸ್ಲಾಮಿನ ಅಧ್ಯಯನ, ಅದರ ಪ್ರಚಾರ ಮತ್ತು ಸೇವೆಗಾಗಿ ಬದುಕನ್ನು ಮುಡಿಪಾಗಿರಿಸಿದವರಾಗಿದ್ದರು. ಖಲೀಫಾ ಅಬೂಬಕರ್(ರ), ಉಮರ್(ರ)ರಂತಹ ಪ್ರಗಲ್ಭ ಸಹಾಬಿಗಳು ಕೂಡಾ ಧಾರ್ಮಿಕ ವಿಷಯಗಳ ಕುರಿತಾದ ಸಂಶಯ ನಿವಾರಣೆಗಾಗಿ ಪ್ರವಾದಿ(ಸ)ರ ಪತ್ನಿಯರನ್ನು ಸಮೀಪಿಸುತ್ತಿದ್ದರು. ಹದೀಸ್ ಗ್ರಂಥಗಳು ಮತ್ತು ಇತಿಹಾಸ ಗ್ರಂಥಗಳನ್ನು ತೆರೆದು ನೋಡಿದರೆ ಈ ಕುರಿತು ಸಾಕಷ್ಟು ಉದಾಹರಣೆಗಳನ್ನು ಕಾಣಬಹುದಾಗಿದೆ.

3. ಇಸ್ಲಾಮ್ ಹಾಗೂ ಮುಸ್ಲಿಮರ ವಿರುದ್ಧ ಅರಬ್ ಗೋತ್ರಗಳು ಕಟ್ಟಿಕೊಂಡಿದ್ದ ಹಗೆತನ, ಎಸಗುತ್ತಿದ್ದ ಅಕ್ರಮ, ಮರ್ದನ, ಯುದ್ಧಗಳು ಮರೆಯುವಂತಹದ್ದಲ್ಲ. ಅಂತಹ ಸಂದರ್ಭಗಳಲ್ಲಿ, ಪ್ರಮುಖ ಅರಬಿ ಗೋತ್ರಗಳೊಂದಿಗೆ ವೈವಾಹಿಕ ಸಂಬಂಧ ಮಾಡಿಕೊಂಡಿದ್ದಿದ್ದರೆ ಹಲವು ರೀತಿಯಲ್ಲಿ ಉಪಕಾರವಾಗುತ್ತಿತ್ತು. ಇಂದಿನ ಹಾಗೆ ವಿಶೇಷವಾಗಿ ನಮ್ಮ ನಾಡುಗಳಲ್ಲಿರುವ ಹಾಗೆ - ಕುಟುಂಬ ಸಂಬಂಧ ಹಾಗೂ ವೈವಾಹಿಕ ಸಂಬಂಧಗಳಿಗೆ ಬೆಲೆ ಕೊಡದಿರುವ ಸಂಪ್ರದಾಯ ಅರಬರಲ್ಲಿರಲಿಲ್ಲ. ಒಂದು ಗೋತ್ರದ ಒಂದು ಮನೆಯವರಿಗೆ ವಿವಾಹ ಸಂಬಂಧ ಉಂಟಾದರೆ ಆ ಗೋತ್ರದ ಸಾವಿರಾರು ಅಥವಾ ಅದಕ್ಕಿಂತಲೂ ಹೆಚ್ಚಿನ ಮನೆಯವರೆಲ್ಲರೂ - ಅವರ ಶಾಖೋಪಶಾಖಾ ವಂಶಗಳ ಸಹಿತ ಪರಸ್ಪರ ಪ್ರೀತಿ ಹಾಗೂ ಐಕ್ಯದಿಂದ ವರ್ತಿಸಲು ಆ ವಿವಾಹ ಸಂಬಂಧವು ಕಾರಣವಾಗುತ್ತಿತ್ತು. ಹಲವು ಗೋತ್ರಗಳಿಂದ ಪ್ರವಾದಿ(ಸ)ರು ನಡೆಸಿದ ವಿವಾಹಗಳು ಕೆಲವೊಮ್ಮೆ ಶತ್ರುಗಳ ವಿರೋಧವನ್ನು ತಡೆಯಲು ಮತ್ತು ಹಗೆತನವನ್ನು ತಣಿಸಲು ಸಹಕಾರಿಯಾಗಿದ್ದವು.. ಪ್ರತೀಯೊಂದನ್ನು ಉದಾಹರಣೆ ಸಹಿತ ಇಲ್ಲಿ ವಿವರಿಸುವುದಿಲ್ಲ. ಪ್ರತೀಯೋರ್ವ ಪತ್ನಿಯ ವಿವಾಹದ ಕುರಿತು ಮುಂದೆ ವಿವರಿಸುವಲ್ಲೆಲ್ಲಾ ಈ ವಾಸ್ತವ ಹೆಚ್ಚು ಕಡಿಮೆ ಸ್ಪಷ್ಟವಾಗಬಹುದು.

4. ಶತ್ರು ಕುಟುಂಬಗಳೊಂದಿಗೆ ಸೌಹಾರ್ದತೆ ಸ್ಥಾಪಿಸುವುದರಲ್ಲಿ ಪ್ರವಾದಿ(ಸ)ರ ವಿವಾಹ ಸಂಬಂಧಗಳಿಗೆ ಹಿರಿದಾದ ಪಾಲಿದ್ದ ಹಾಗೆಯೇ ಮುಸ್ಲಿಮ್ ಕುಟುಂಬಗಳನ್ನು ಹೆಚ್ಚೆಚ್ಚು ಒಂದುಗೂಡಿಸುವಲ್ಲಿ ಮತ್ತು ತ್ಯಾಗ ಸನ್ನದ್ಧರಾಗಿ ಮಾಡುವಲ್ಲಿಯೂ ಅದಕ್ಕೆ ಪಾಲಿತ್ತು. ತಮ್ಮೊಂದಿಗೆ ಅಥವಾ ತಮ್ಮ ಕುಟುಂಬದೊಂದಿಗೆ ಪ್ರವಾದಿ(ಸ)ರಿಗೆ ವಿವಾಹ ಸಂಬಂಧ ಅಥವಾ ಬೇರೆ ಯಾವುದಾದರೂ ಸಾಮೀಪ್ಯವುಂಟಾಗುವುದೆಂದರೆ ಸಹಾಬಿಗಳ ಮಟ್ಟಿಗೆ ಅದೆಷ್ಟು ಸಂತಸಕರ ಹಾಗೂ ಅಭಿಮಾನಕರವಾಗಿತ್ತೆಂಬುದನ್ನು ವಿವರಿಸಲಸಾಧ್ಯ. ಮಾತ್ರವಲ್ಲ, ಅಂತಹದೊಂದು ಸಂಬಂಧ ಮುರಿದು ಹೋಗುವುದರ ಕುರಿತು ಅವರಿಗೆ ಊಹಿಸಲು ಸಹ ಅಸಾಧ್ಯವಾಗಿತ್ತು.

ಪ್ರವಾದಿ(ಸ)ರ ಪತ್ನಿಯರೆಲ್ಲಾ ಒಟ್ಟಾಗಿ ತಮಗೆ ಖರ್ಚಿಗೆ ಕೊಡಬೇಕು ಇತ್ಯಾದಿ ಅಪೇಕ್ಷಿಸಿದ್ದು ಮತ್ತು ಆ ಕುರಿತು ಕೆಲ ಕುರ್‌ಆನ್ ವಚನಗಳು ಅವತೀರ್ಣಗೊಂಡದ್ದು ಸೂರಾಃ ಅಹ್‌ಝಾಬ್‌ನಲ್ಲಿ ಕಾಣಬಹುದಾಗಿದೆ. ಈ ಘಟನೆಯಲ್ಲಿ ಪ್ರವಾದಿ(ಸ)ರು ಪತ್ನಿಯರನ್ನು ವಿಚ್ಛೇದಿಸಿದರು ಎಂಬ ಅಪಪ್ರಚಾರವೊಂದು ಹರಡಿತು. ಈ ವಿಷಯವನ್ನು ತಿಳಿಸಲಿಕ್ಕಾಗಿ ಒಬ್ಬರು ರಾತ್ರಿ ಹೊತ್ತಲ್ಲಿ ಬಂದು ಉಮರ್(ರ) ರವರ ಬಾಗಿಲು ತಟ್ಟಿದ್ದರು. ಗಸ್ಸಾನಿ ಗೋತ್ರದವರು ಮುಸ್ಲಿಮರೊಂದಿಗೆ ಯುದ್ಧಕ್ಕೆ ಸನ್ನದ್ಧರಾಗಿದ್ದಾರೆಂಬ ವದಂತಿ ಕೇಳಿ ಬರುತ್ತಿದ್ದ ಸಂದರ್ಭವಾಗಿತ್ತು ಅದು. ಬಾಗಿಲು ತೆರೆದು ಹೊರ ಬಂದ ಉಮರ್(ರ)ರವರು 'ಏನು, ಗಸ್ಸಾನ್‌ನವರು ಬಂದರೇ?' ಎಂದು ಕೇಳಿದರು. ಬಂದ ವ್ಯಕ್ತಿ ಪ್ರವಾದಿ(ಸ)ರೊಂದಿಗೆ ಕುಟುಂಬ ಸಂಬಂಧವಾಗಲಿ, ವಿವಾಹ ಸಂಬಂಧವಾಗಲಿ ಇಲ್ಲದ ಓರ್ವ ಅನ್ಸಾರಿಯಾಗಿದ್ದರು. ಹಾಗಿದ್ದೂ ಆತ ಉಮರ್(ರ)ರೊಡನೆ ಹೇಳಿದ ಉತ್ತರವನ್ನು ನೋಡಿರಿ: "ಅಲ್ಲ, ಅದಕ್ಕಿಂತಲೂ ಗಂಭೀರ ಹಾಗೂ ದುಃಖಕರ ಘಟನೆಯೊಂದು ನಡೆದಿದೆ! ಪ್ರವಾದಿ(ಸ)ರು ತನ್ನ ಪತ್ನಿಯರನ್ನು ವಿಚ್ಛೇದಿಸಿದ್ದಾರೆ" ಈ ಉತ್ತರದ ಆಳವನ್ನೊಮ್ಮೆ ಪರಿಶೋಧಿಸಿ ನೋಡಿರಿ.

(8ನೇ ಪುಟಕ್ಕೆ)

# ಧರ್ಮನಿಷ್ಠ ಖಲೀಫರು

✍ ಅಹ್ಮದ್ ಅನ್ಸಾರ್,
ಮಂಗಳೂರು

ಮುಸ್ಲಿಮ್ ಸಾಮ್ರಾಜ್ಯದ ಪ್ರಥಮ ಖಲೀಫ ಅಬೂಬಕರ್ ಸಿದ್ದೀಕ್(ರ)ರವರು ಕ್ರಿ.ಶ. 573ರಲ್ಲಿ ಮಕ್ಕಾದಲ್ಲಿ ಜನಿಸಿದರು. ಪ್ರಾಯದಲ್ಲಿ ಪ್ರವಾದಿ(ಸ)ರಿಗಿಂತ 2 ವರ್ಷ ಚಿಕ್ಕವರು. ಕುರೈಶಿ ಗೋತ್ರದ ಒಂದು ಶಾಖೆಯಾದ ಬನೀ ತಮೀಮ್ ಎಂಬ ಗೌರವಸ್ಥ ಮನೆತನದ ಸುಪುತ್ರರಾದ ಅಬೂಬಕರ್ ಸಿದ್ದೀಕ್(ರ)ರವರ ನಿಜವಾದ ಹೆಸರು ಅಬ್ದುಲ್ಲಾಹ್ ಎಂದಾಗಿದೆ. ಹೆಚ್ಚಿನವರಿಗೆ ಈ ಹೆಸರು ಗೊತ್ತಿಲ್ಲ. ಅಬೂಬಕರ್ ಎಂಬುದು ಅವರ ಸ್ವದೇಶ ನಿಷ್ಠೆಯ ಹೆಸರು. ಇಸ್ಲಾಮ್ ಧರ್ಮ ಸ್ವೀಕರಿಸಿದ ಬಳಿಕ ಅವರನ್ನು ಅಲ್ ಸಿದ್ದೀಖ್ (ಸತ್ಯವಂತ) ಎಂದು ಕರೆಯಲಾಯಿತು. ಅಬೂಬಕರ್ ಸಿದ್ದೀಖ್‌ರವರ ವಂಶ ಪರಂಪರೆಯು ಪ್ರವಾದಿ(ಸ)ರವರ ವಂಶದ ಮೊದಲ 6 ತಲೆಮಾರಿನೊಂದಿಗೆ ಸೇರುತ್ತದೆ. ತಂದೆಯ ಹೆಸರು ಉಸ್ಮಾನ್ (ಸ್ವದೇಶನಿಷ್ಠೆಯ ಹೆಸರು ಅಬೂಖುಆಫ್) ಮತ್ತು ತಾಯಿಯ ಹೆಸರು ಸಲ್ಮಾ (ಸ್ವದೇಶನಿಷ್ಠೆಯ ಹೆಸರು ಉಮ್ಮುಲ್ ಖೈರ್) ಎಂದಾಗಿದೆ.

### ಇಸ್ಲಾಮ್ ಸ್ವೀಕಾರಕ್ಕಿಂತ ಮುಂಚಿನ ಜೀವನ

ಅಬೂಬಕರ್ ಸಿದ್ದೀಖ್(ರ)ರವರು ಬಾಲ್ಯದಲ್ಲೇ ನೇರ ನಡೆನುಡಿಯ ಸರಳ ಸ್ವಭಾವದ ವ್ಯಕ್ತಿಯಾಗಿದ್ದರು. ಸತ್ಯಸಂಧ ಹಾಗೂ ಪ್ರಾಮಾಣಿಕರಾಗಿದ್ದ ಇವರ ವಿಶಿಷ್ಟ ಗುಣ ಸ್ವಭಾವಗಳು ಚಿಕ್ಕಂದಿನಲ್ಲೇ ಪ್ರವಾದಿ(ಸ)ರ ಸಾಮೀಪ್ಯ ಪಡೆಯಿತು. ಅದು ಬದುಕಿನ ಕೊನೇತನಕವೂ ಉಳಿದಿತ್ತು. ಅವರ ಮೃದು ಹೃದಯ ಇತರರ ಕಷ್ಟಕಾರ್ಪಣ್ಯಗಳ ಕುರಿತು ಮರುಗುತ್ತಿತ್ತು. ಬಡವರಿಗೆ, ನಿರ್ಗತಿಕರಿಗೆ ಮತ್ತು ಮರ್ಧಿತರಿಗೆ ಸದಾ ಸಹಾಯ ಮಾಡುತ್ತಿದ್ದ ಅಬೂಬಕರ್(ರ)ರವರು ಇಸ್ಲಾಮ್ ಸ್ವೀಕರಿಸುವುದಕ್ಕಿಂತ ಮುಂಚೆಯೇ ಜಾಹಿಲಿಯ್ಯತ್‌ನ ಸಂಪ್ರದಾಯ ಹಾಗೂ ಅಮಲು ಪದಾರ್ಥಗಳ ಸೇವನೆಯಂತಹ ದುಶ್ಚಟಗಳಿಂದ ದೂರ ಉಳಿದಿದ್ದರು. ಅವರ ಮುಖ್ಯ ಕಸುಬು ವ್ಯಾಪಾರವಾಗಿತ್ತು. ಕೆಲವೊಮ್ಮ ಪ್ರವಾದಿ(ಸ)ರೊಂದಿಗೆ ವ್ಯಾಪಾರದಲ್ಲಿ ಶಾಮೀಲಾಗುತ್ತಿದ್ದರು. ಅವರ ಪ್ರಾಮಾಣಿಕತೆ ಮತ್ತು ಸತ್ಯಸಂಧತೆಗಳು ಅವರನ್ನು ಶ್ರೀಮಂತರನ್ನಾಗಿಸಿದವು. ಅವರ ಈ ಉತ್ತಮ ಗುಣಗಳೇ ಅವರನ್ನು ಅಲ್ಲಾಹನ ಸೇವೆಯ ಕಡೆಗೆ ಕೊಂಡೊಯ್ದವು.

### ಇಸ್ಲಾಮನ್ನು ಸ್ವೀಕರಿಸಿದ ಮೊದಲ ವ್ಯಕ್ತಿ

ಪ್ರವಾದಿ(ಸ)ರ ಅತ್ಯಂತ ಆಪ್ತ ಸ್ನೇಹಿತರಾದ ಅಬೂಬಕರ್ ಸಿದ್ದೀಖ್(ರ)ರವರಷ್ಟು ಪ್ರವಾದಿ(ಸ)ರನ್ನು ತಿಳಿದವರು ಬೇರೆ ಯಾರೂ ಇಲ್ಲ. ಪ್ರವಾದಿ(ಸ)ರಿಗೆ ಅಲ್ಲಾಹನ ಸಂದೇಶ ಅವತೀರ್ಣಗೊಂಡಾಗ ಒಂದಿಷ್ಟೂ ಸಂದೇಹ ಪಡದೆ ತಕ್ಷಣ ಅಂಗೀಕರಿಸಿದವರು ಅಬೂಬಕರ್ ಸಿದ್ದೀಖ್(ರ) ಮಾತ್ರ. ಪ್ರವಾದಿ(ಸ)ರು ಹೇಳಿದರು: "ಅಲ್ಲಾಹನ ಕಡೆಗ ಜನರನ್ನು ಆಹ್ವಾನಿಸಿದಾಗ ಎಲ್ಲರೂ ಸಂಶಯಗೊಂಡು ಚಿಂತಿಸ ತೊಡಗಿದರು. ಅಬೂಬಕರ್ ಸಿದ್ದೀಖ್(ಸ)ರ ಹೊರತು. ಅವರು ಕಿಂಚಿತ್ತೂ ಯೋಚನೆ ಮಾಡದೆ ಇಸ್ಲಾಮನ್ನು ಸ್ವೀಕರಿಸಿದರು". ಪ್ರವಾದಿ(ಸ)ರು ಅತೀವ ಸಂತಸಗೊಂಡರು.




### ದಅ್‌ವಾ ರಂಗಕ್ಕೆ ಪಾದಾರ್ಪಣೆ

ಅಲ್ಲಾಹನ ಧರ್ಮವನ್ನು ಸ್ವೀಕರಿಸಿದ ತಕ್ಷಣವೇ ಅಬೂಬಕರ್ ಸಿದ್ದೀಖ್(ರ)ರವರು ರಹಸ್ಯವಾಗಿಯೂ ಬಹಿರಂಗವಾಗಿಯೂ ಅಲ್ಲಾಹನ ಸಂದೇಶ ಪ್ರಚಾರ ಕಾರ್ಯದಲ್ಲಿ ತೊಡಗಿದರು. ಅವರು ನೇರವಾಗಿ ಉಸ್ಮಾನ್, ತಲ್‌ಹಾ, ಝುಬೈರ್, ಸೈದ್ ಮುಂತಾದವರ ಬಳಿಗೆ ತೆರಳಿ ಅಲ್ಲಾಹನ ಏಕತ್ವವನ್ನು ಬೋಧಿಸಿದರು. ಅವರೆಲ್ಲರೂ ಇಸ್ಲಾಮ್ ಸ್ವೀಕರಿಸಿದರು. ಮರುದಿನ ಉಸ್ಮಾನ್‌ಬ್‌ನು ಮದ್‌ಊನ್, ಅಬೂ ಉಬೈದ, ಅಬ್ದುಲ್ ರಹಮಾನುಬ್‌ನು ಔಫ್ ಮುಂತಾದ ಪ್ರಮುಖ ಕುರೈಶರನ್ನು ಭೇಟಿಯಾಗಿ ಸತ್ಯಸಂದೇಶದ ಉಪದೇಶ ನೀಡಿದರು. ಪರಿಣಾಮವಾಗಿ ಎಂಟು ಮಂದಿ ಪ್ರಮುಖರು ಇಸ್ಲಾಮನ್ನು ಅಂಗೀಕರಿಸಿದರು. ಅವರಲ್ಲಿ 3ನೇ ಖಲೀಫ ಉಸ್ಮಾನುಬ್‌ನು ಅಫ್ಫಾನ್ ಕೂಡಾ ಇದ್ದರು. ಪ್ರವಾದಿ(ಸ)ರನ್ನು ಬಿಟ್ಟರೆ ಇಸ್ಲಾಮಿನ ಕುರಿತು ಉಪದೇಶ ನೀಡಿದ ಮತ್ತು ಜನರನ್ನು ಇಸ್ಲಾಮಿನ ಕಡೆಗೆ ಆಹ್ವಾನಿಸಿದ ಮೊದಲ ವ್ಯಕ್ತಿ ಅಬೂಬಕರ್ ಸಿದ್ದೀಖ್(ರ)ರವರಾಗಿದ್ದಾರೆ. ಅವರ ಪ್ರಾಮಾಣಿಕತೆ, ಸತ್ಯಸಂಧತೆ, ಸದ್ಗುಣ ಸಂಪನ್ನತೆ ಹಾಗೂ ಮಕ್ಕಾ ನಿವಾಸಿಗಳ ಮಧ್ಯೆ ಅವರಿಗಿದ್ದ ಜನಪ್ರಿಯತೆಗಳು ದೀನೀ ದಅ್‌ವಾ ಕಾರ್ಯದಲ್ಲಿ ಅವರಿಗೆ ನೆರವಾದವು.

### ಪೀಡನೆ ಅನುಭವಿಸಿದ ಅಬೂಬಕರ್(ರ)

ಇಷ್ಟೆಲ್ಲಾ ಗೌರವಾದರಗಳ ವ್ಯಕ್ತಿಯಾಗಿಯೂ ಅಬೂಬಕರ್(ರ)ರವರು ಮಕ್ಕಾ ಮುಶ್ರಿಕರ ಕೋಪ ಹಾಗೂ ಪೀಡನೆಗಳಿಗೆ ಗುರಿಯಾಗದಿರಲಿಲ್ಲ. ಅಬೂಬಕರ್(ರ)ರವರ ಮನೆ ಮನೆ ಸಂದೇಶ ಪ್ರಚಾರದ ಪರಿಣಾಮವಾಗಿ 39 ಮಂದಿ ಕುರೈಶಿ ಪ್ರಮುಖರ ಇಸ್ಲಾಮ್ ಸ್ವೀಕಾರದೊಂದಿಗೆ ಮುಸ್ಲಿಮರ ಶಕ್ತಿ ಸ್ವಲ್ಪ ವೃದ್ಧಿಸಿದಾಗ ಬಹಿರಂಗ ಪ್ರಚಾರಕ್ಕಾಗಿ ಪ್ರವಾದಿ(ಸ)ರೊಂದಿಗೆ ಅನುಮತಿ ಕೇಳಿದರು. ಪ್ರವಾದಿ(ಸ)ರು ಒಪ್ಪಿಗೆ ನೀಡಿದರು. ಕೂಡಲೇ ಅವರೆಲ್ಲಾ ಇಸ್ಲಾಮಿನ ಬಹಿರಂಗ ಪ್ರಚಾರಕ್ಕಾಗಿ ಮಕ್ಕಾ ಮುಖರ್ರಮ್ (ಕಅಬಾ)ಕ್ಕೆ ತೆರಳಿದರು. ಅಲ್ಲಿ ಅಬೂಬಕರ್ ಸಿದ್ದೀಖ್(ರ)ರವರು ಇಸ್ಲಾಮಿನ ಸಂದೇಶದ ಕುರಿತು ಸಾರವತ್ತಾಗಿ ಉಪದೇಶ ನೀಡಿದರು. ಈ ಉಪದೇಶವನ್ನು ಆಲಿಸಿದ ಧೀರ ಪ್ರಮುಖ ಹಂಝ(ರ)ರವರು ಅಂದೇ ಇಸ್ಲಾಮನ್ನು ಸ್ವೀಕರಿಸಿದರು. ಹಂಝಾ(ರ)ರ ಇಸ್ಲಾಮ್ ಸ್ವೀಕಾರದ ಸುದ್ದಿ ಮಿಂಚಿನಂತೆ ಹರಡಿತು. ಸುದ್ದಿ ತಿಳಿದ ಕುರೈಶರು ಮತ್ತು ಮಕ್ಕಾ ಮುಶ್ರಿಕರು ನಾಲ್ಕು ಕಡೆಗಳಿಂದಲೂ ಕಅಬಾವನ್ನು ಸುತ್ತುವರಿದರು. ಅಬೂಬಕರ್(ರ)ರವರ ಘನತೆ, ಗೌರವ ಯಾವುದನ್ನೂ ಲೆಕ್ಕಿಸದೆ ಅವರ ಮೇಲೆರಗಿ ಹಲ್ಲೆ ಮಾಡಿದರು. ಕಾಲಿನಿಂದ ತುಳಿದರು. ಮೂಗು, ಕಣ್ಣುಗಳಿಗೆ ಗಾಯವಾಗಿ ಮುಖ ರಕ್ತಸಿಕ್ತವಾಯಿತು. ಹೊಡೆತ, ತುಳಿತಕ್ಕೀಡಾಗಿ ಅಬೂಬಕರ್(ರ)ರವರು ಬೋಧರಹಿತರಾಗಿ ಬಿದ್ದರು. ಬೋಧ ಬಂದಾಗ ಪ್ರವಾದಿ(ಸ)ರು ಹೇಗಿದ್ದಾರೆಂದು ವಿಚಾರಿಸಿದರು. ಪ್ರವಾದಿ(ಸ)ರವರೆಂದರೆ ಅಷ್ಟು ಅಗಾಧವಾದ ಪ್ರೀತಿ. ಪ್ರವಾದಿ(ಸ)ರ ಮೇಲಿನ ಅವರ ಸ್ನೇಹಾದರಗಳಿಗೆ ಮೇರೆ ಇರಲಿಲ್ಲ.

ಒಂದು ದಿನ ಪ್ರವಾದಿ(ಸ)ರು ಕಅಬಾದಲ್ಲಿ ನಮಾಝ್ ಮಾಡುತ್ತಿದ್ದಾಗ ಅಬೂಜಹಲ್ ಬಂದು ಹಾಸು ಬಟ್ಟೆಯಿಂದ ಅವರ ಕುತ್ತಿಗೆ ಬಿಗಿದು ಕೊಲ್ಲ ಲೆತ್ನಿಸುತ್ತಿದ್ದುದನ್ನು ಕಂಡ ಅಬೂಬಕರ್(ರ)ರವರು ಧಾವಿಸಿ ಬಂದು ಅಬೂಜಹಲ್‌ನನ್ನು ಹಿಡಿದು ದೂರಕ್ಕೆ ದೂಡಿ ಪ್ರವಾದಿ(ಸ)ರ ಕುತ್ತಿಗೆ ಬಿಗಿದ ಬಟ್ಟೆಯನ್ನು ಬಿಚ್ಚಿಸಿ ಹೇಳುತ್ತಾರೆ: "ಈ ಗೌರವಾನ್ವಿತ ವ್ಯಕ್ತಿಯ ಹತ್ಯೆ ಮಾಡುತ್ತಿಯಾ, ಅವರು ಅಲ್ಲಾಹನ ಸಂದೇಶವಾಹಕರಾಗಿದ್ದಾರೆ, ಸರ್ವ ಲೋಕಗಳ ಪರಿಪಾಲಕನು ಮತ್ತು ಸಂರಕ್ಷಕನಾದ ಅಲ್ಲಾಹನೊಬ್ಬನು" ಎಂದು ಘೋಷಿಸಿದರು. ಅಷ್ಟರಲ್ಲಿ ಅಬೂಜಹಲ್ ಮತ್ತು ಅವನ ಸಂಗಡಿಗರು ಅಬೂಬಕರ್(ರ)ರವರ ಮೇಲೆ ಮುಗಿಬಿದ್ದು ಚೆನ್ನಾಗಿ ಥಳಿಸಿದರು.

(ಮುಂದುವರಿಯುವುದು)

# ಮಾನವ ಸೃಷ್ಟಿಯ ಉದ್ದೇಶವೇನು?

(3ನೇ ಪುಟದಿಂದ)

ಮಡದಿ ಮಕ್ಕಳನ್ನಾಗಲಿ ಅವನು ಹೊಂದಿರುವುದಿಲ್ಲ.

3. ದೇವನು ಅತ್ಯಂತ ಶಕ್ತಿಶಾಲಿಯಾಗಿ ಅವನ ಸೃಷ್ಟಿಗಳಿಂದ ಭಿನ್ನವಾಗಿರುವುದರಿಂದ, ಅವನಿಗೆ ಆಯಾಸವಾಗದು, ಮರೆಯುವಿಕೆ ಎಂಬುವುದು ಅವನಿಗಿಲ್ಲ ಅಥವಾ ಅವನಿಂದ ಯಾವುದೇ ತಪ್ಪು ಸಂಭವಿಸದು.
4. ಎಲ್ಲಾ ಮಾನವರು ಅವನ ದೃಷ್ಟಿಯಲ್ಲಿ ಸರಿಸಮಾನರು, ಅವನು ಎಲ್ಲಾ ಮನುಷ್ಯರನ್ನು ಪ್ರೀತಿಸುತ್ತಾನೆ. ಬಣ್ಣ, ಜಾತಿ-ಮತ, ಕುಲ ಗೋತ್ರ, ಮಹಿಮೆ ಅಥವಾ ವಂಶದ ಆಧಾರದ ಮೇಲೆ ತಾರತಮ್ಯ ಮಾಡುವುದಿಲ್ಲ.

**ಮರಣಾ ನಂತರ ಜೀವನ:**

ಎಲ್ಲಾ ವಸ್ತುಗಳಂತೆ ಈ ಭೂಮಿಯೂ ಒಂದು ದಿನ ಅಂತ್ಯಗೊಳ್ಳಲಿದೆ. ಆ ದಿನವನ್ನೇ "ನಿರ್ಣಾಯಕ ದಿನ" ಅಥವಾ "ನ್ಯಾಯದ ದಿನ" ವೆಂದು ಕರೆಯಲಾಗುತ್ತದೆ. ಅಂದು ಈ ಭೂಮಿಯ ಪ್ರಾರಂಭದಿಂದ, ಅಂತ್ಯದ ವರೆಗಿನ ಎಲ್ಲಾ ಮನುಷ್ಯರಿಗೂ ಮರುಜೀವವನ್ನು ನೀಡಲಾಗುವುದು ಮತ್ತು ಅವರೆಸಗಿದ ಕೃತ್ಯಗಳ ಬಗ್ಗೆ ಅವರನ್ನು ಪ್ರಶ್ನಿಸಲಾಗುವುದು. ಯಾರು ಕೇವಲ ತನ್ನ ಸೃಷ್ಟಿಕರ್ತನನ್ನು ಆರಾಧಿಸಿ ಉತ್ತಮ ಕಾರ್ಯಗಳನ್ನು ಮಾಡುತ್ತಾ, ತಮಗೆ ಭೂಮಿ ಯಲ್ಲಿ ಲಭಿಸಿದ ಕಾಲಾವಧಿಯಲ್ಲಿ ದೇವನ ಆಜ್ಞೆಗನುಗುಣವಾಗಿ ಜೀವಿಸುತ್ತಾರೋ, ಅವರಿಗೆ ಉತ್ತಮ ಪ್ರತಿಫಲವನ್ನು ನೀಡಲಾಗುವುದು ಮತ್ತು ಯಾರು ದೇವನನ್ನು ಧಿಕ್ಕರಿಸಿ, ಅವನ ಆಜ್ಞೆಗಳನ್ನು ಪಾಲಿಸುವುದಿಲ್ಲವೋ ಅವರಿಗೆ ಶಿಕ್ಷೆ ನೀಡಲಾಗುವುದು. ಉತ್ತಮ ಪ್ರತಿಫಲವು ಸ್ವರ್ಗವಾಗಿರುವುದು ಮತ್ತು ಶಿಕ್ಷೆಯು ನರಕವಾಗಿರುವುದು. ಸ್ವರ್ಗ ಮತ್ತು ನರಕದ ಜೀವನವು ಶಾಶ್ವತವಾಗಿದೆ - ಅದಕ್ಕೆಂದೂ ಕೊನೆಯಿಲ್ಲ.

**'ಮರಣಾ ನಂತರ ಜೀವನ' ಅಥವಾ 'ನಿರ್ಣಾಯಕ ದಿನ'ದ ಅಗತ್ಯವಾದರೂ ಏನು?**

ನಮ್ಮಲ್ಲಿ ಪ್ರತಿಯೊಬ್ಬರೂ ನ್ಯಾಯವನ್ನು ಬಯಸುತ್ತಾರೆ. ಇತರರಿಗೆ ನ್ಯಾಯವನ್ನು ಬಯಸದವನು ತನಗೆ ಮಾತ್ರ ನ್ಯಾಯ ದೊರೆಯಲೇಬೇಕು ಎಂದು ಹಂಬಲಿಸುವುದನ್ನು ನಾವು ಕಾಣುತ್ತೇವೆ. ಬಡವ-ಶ್ರೀಮಂತರೆಂಬ ಭೇದವಿಲ್ಲದೆ ಎಲ್ಲರೂ ತಮಗೆ ಅನ್ಯಾಯವೆಸಗಿದವರಿಗೆ ತಕ್ಕ ಶಿಕ್ಷೆಯಾಗಬೇಕೆಂದು ಆಶಿಸುತ್ತಾರೆ. ಓರ್ವ ದರೋಡೆಕೋರ ಅಥವಾ ಅತ್ಯಾಚಾರಿಗೆ ಆತನೆಸಗಿದ ತಪ್ಪಿಗೆ ಅನುಗುಣವಾಗಿ

(8ನೇ ಪುಟಕ್ಕೆ)

# ದುಲ್‌ಹಿಜ್ಜಃ ತಿಂಗಳ ಮೊದಲ ಹತ್ತು ದಿನಗಳ ಶ್ರೇಷ್ಠತೆ

**ದುಲ್‌ಹಿಜ್ಜಃ ತಿಂಗಳ ಮೊದಲ ಹತ್ತು ದಿನಗಳು ಅಲ್ಲಾಹನ ಬಳಿ ಅತೀ ಶ್ರೇಷ್ಠ ದಿನಗಳೆಂದು ಪ್ರವಾದಿ(ಸ)ರವರು ಹೇಳಿದ್ದಾರೆ:**

(أفضل أيام الدنيا أيام العشر يعني عشر ذي الحجة، قيل: ولا مثلهن في سبيل الله؟ قال ولا مثلهن في سبيل الله إلا رجل عفر وجهه في التراب)

ಪ್ರವಾದಿ(ಸ)ರವರು ಈ ಹತ್ತು ದಿನಗಳಲ್ಲಿ ಮಾಡುವ ಸತ್ಕರ್ಮಗಳಿಗಿಂತ ಹೆಚ್ಚು ಶ್ರೇಷ್ಠವಾಗಿರುವ ದಿನಗಳು ಅಲ್ಲಾಹನ ಬಳಿ ಬೇರೆಯಿಲ್ಲ. "ಅಲ್ಲಾಹನ ಮಾರ್ಗದಲ್ಲಿರುವ ಜಿಹಾದ್ ಕೂಡಾ ಇಲ್ಲವೇ?" ಎಂದು ಸ್ವಹಾಬಿಗಳು ಕೇಳಿದರು. ಆಗ ಪ್ರವಾದಿ(ಸ)ರವರು "ಜಿಹಾದ್ ಕೂಡಾ ಇಲ್ಲ. ಆದರೆ ದೇಹ ಮತ್ತು ಸಂಪತ್ತಿನೊಂದಿಗೆ ರಣರಂಗಕ್ಕೆ ತೆರಳಿ ಅವೆರಡನ್ನೂ ತ್ಯಜಿಸುವವನ ಹೊರತು" (ಅಹ್ಮದ್).

**ಈ ದಿನಗಳಲ್ಲಿ ಅಲ್ಲಾಹನನ್ನು ಹೆಚ್ಚಾಗಿ ಸ್ಮರಿಸಬೇಕು**

ಅಲ್ಲಾಹು ಕಡ್ಡಾಯಗೊಳಿಸಿದ ಕರ್ಮಗಳನ್ನು ನಿಷ್ಠೆಯಿಂದ ಪಾಲಿಸುವುದರ ಜೊತೆಗೆ ದಾನಧರ್ಮ ಹಾಗೂ ದಿಕ್ರ್‌ಗಳನ್ನು ಹೆಚ್ಚು ಹೆಚ್ಚಾಗಿ ಹೇಳುತ್ತಿರಬೇಕು.

(ما من أيام أعظم عند الله ولا أحب إليه العمل فيهن من هذه الأيام العشر، فأكثروا فيهن من التهليل والتكبير والتحميد)

ಅಲ್ಲಾಹನ ಬಳಿ ಹೆಚ್ಚು ಪುಣ್ಯ ಹಾಗೂ ಅಲ್ಲಾಹನಿಗೆ ಹೆಚ್ಚು ಇಷ್ಟವಾಗಿರುವ ದಿನ ಈ ಹತ್ತು ದಿನಗಳಲ್ಲದೆ ಬೇರೆ ಇಲ್ಲ. ಆದುದರಿಂದ ನೀವು ಅದರಲ್ಲಿ ಹೆಚ್ಚಾಗಿ ತಕ್‌ಬೀರ್, ತಹ್‌ಲೀಲ್ ಮತ್ತು ತಹ್ಮೀದನ್ನು ಹೆಚ್ಚಿಸಿರಿ. "ಅಲ್ಲಾಹು ಅಕ್ಬರ್, ಅಲ್ಲಾಹು ಅಕ್ಬರ್ ಅಲ್ಲಾಹು ಅಕ್ಬರ್ ಲಾಇಲಾಹ ಇಲ್ಲಲ್ಲಾಹು ವಲ್ಲಾಹು ಅಕ್ಬರ್. ಅಲ್ಲಾಹು ಅಕ್ಬರ್ ವಲಿಲ್ಲಾಹಿಲ್ ಹಮ್ದ್" ಎಂಬ ದಿಕ್ರನ್ನು ದುಲ್‌ಹಿಜ್ಜಃ ಒಂದರಿಂದ 13ರ ವರೆಗೆ ಪುರುಷರು ಜೋರಾಗಿ ಹಾಗೂ ಮಹಿಳೆಯರು ತನ್ನ ಪಕ್ಕದಲ್ಲಿರುವವರಿಗೆ ಕೇಳಿಸುವಂತೆ ಮೆಲ್ಲಗೆ ಹೇಳಬೇಕು.

ದುಲ್‌ಹಿಜ್ಜಃ 9ರ ಉಪವಾಸ ಕುರಿತು ಪ್ರವಾದಿ(ಸ)ರವರಲ್ಲಿ ವಿಚಾರಿಸಿದಾಗ ಅವರು ಹೇಳಿದರು:

«يُكَفِّرُ السَّنَةَ الْمَاضِيَةَ وَالْبَاقِيَةَ»

ಅದು ಗತ ವರ್ಷದ ಮತ್ತು ಮುಂಬರಲಿರುವ ವರ್ಷದ ಪಾಪಗಳನ್ನು ಅಳಿಸುತ್ತದೆ (ಮುಸ್ಲಿಮ್).

**ಉದುಹಿಯ್ಯಃ (ಕುರ್‌ಬಾನಿ):**

ಶರೀಅತ್ ನಿರ್ದೇಶಿಸಿದ ಮತ್ತು ಆರಾಧನೆಗಳ ಪೈಕಿ ಅತಿ ಶ್ರೇಷ್ಠವಾದ ಕರ್ಮವಾಗಿದೆ ಕುರ್ಬಾನಿ. ಎಲ್ಲಾ ಸಮುದಾಯಕ್ಕೂ ಅಲ್ಲಾಹನಿಗೆ ಬಲಿ ನೀಡುವ ಆರಾಧನೆಯನ್ನು ನಿರ್ದೇಶಿಸಲಾಗಿದೆ. ಕುರ್‌ಆನಿನ ಸೂರಃ 108ನೇ ಅಧ್ಯಾಯದ 2ನೇ ಸೂಕ್ತದಲ್ಲಿ "ಆದುದರಿಂದ ನೀನು ನಿನ್ನ ಪ್ರಭುವಿಗೆ ನಮಾಝ್ ಮಾಡು ಮತ್ತು ಬಲಿಯರ್ಪಿಸು ಎಂದು ಅಲ್ಲಾಹು ಆದೇಶಿಸುತ್ತಾನೆ.

لَن يَنَالَ اللَّهَ لُحُومُهَا وَلَا دِمَاؤُهَا وَلَٰكِن يَنَالُهُ التَّقْوَىٰ مِنكُمْ كَذَٰلِكَ سَخَّرَهَا لَكُمْ لِتُكَبِّرُوا اللَّهَ عَلَىٰ مَا هَدَاكُمْ وَبَشِّرِ الْمُحْسِنِينَ

ಅವುಗಳ ಮಾಂಸವಾಗಲಿ, ರಕ್ತವಾಗಲಿ ಅಲ್ಲಾಹನ ಬಳಿಗೆ ತಲುಪುವುದಿಲ್ಲ. ಆದರೆ ನಿಮ್ಮ ಭಕ್ತಿ ಅವನ ಬಳಿಗೆ ತಲುಪುತ್ತದೆ. ಅಲ್ಲಾಹು ನಿಮಗೆ ಮಾರ್ಗದರ್ಶನ ಮಾಡಿದ್ದಕ್ಕಾಗಿ ನೀವು ಅವನ ಮಹಾನತೆಯನ್ನು ಕೊಂಡಾಡಬೇಕೆಂದು ಅವನು ನಿಮಗೆ ಅವುಗಳನ್ನು ಈ ರೀತಿ ಅಧೀನಗೊಳಿಸಿ ಕೊಟ್ಟಿರುತ್ತಾನೆ. (ಪ್ರವಾದಿಯವರೇ) ಸುಕೃತ ಗೈಯ್ಯುವವರಿಗೆ ಶುಭವಾರ್ತೆ ತಿಳಿಸಿರಿ.

ಕುರ್ಬಾನಿ ನೀಡಲು ಸಾಧ್ಯವಿರುವವರು ಅದನ್ನು ನೀಡದಿದ್ದರೆ ಪಾಪಿಯಾಗಿದ್ದಾನೆ ಮತ್ತು ಅಲ್ಲಾಹು ಮತ್ತು ರಸೂಲರನ್ನು ಧಿಕ್ಕರಿಸಿದವನಾಗಿದ್ದಾನೆ ಎಂದು ಹೆಚ್ಚಿನ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಅವರು ಹೀಗೆ ಅಭಿಪ್ರಾಯ ಪಡಲು ಪ್ರವಾದಿ(ಸ)ರವರ ಈ ಕೆಳಗಿನ ಹದೀಸ್‌ಗಳು ಕಾರಣವಾಗಿದೆ

(مَنْ وَجَدَ سَعَةً لِأَنْ يُضَحِّيَ فَلَمْ يُضَحِّ فَلَا يَحْضُرْ مُصَلَّانَا)

ಯಾರಾದರೂ ಸಾಧ್ಯವಿದ್ದೂ ಕುರ್ಬಾನಿ ಮಾಡದಿದ್ದರೆ ಅವರು ನಮ್ಮ ಮುಸಲ್ಲಾಕ್ಕೆ (ಈದ್ ಗಾಹ್) ಬರದಿರಲಿ (ಹಾಕಿಮ್).

(يا أيها الناس إن على كل أهل بيت في كل عام أضحية ......)

ಓ ಜನರೇ, ನಿಶ್ಚಯವಾಗಿಯೂ ಪ್ರತೀ ಮನೆಯವರು ಪ್ರತೀ ವರ್ಷವೂ ಒಂದು ಮೃಗವನ್ನು ಬಲಿ ಕೊಡಬೇಕು (ಅಬೂದಾವೂದ್).

**ಕುರ್ಬಾನಿ ಮೃಗವು ಆರೋಗ್ಯದಾಯಕವಾದುದು ನ್ಯೂನತೆಗಳಿಂದ ಮುಕ್ತವಾದುದಾಗಿರಬೇಕು. ನ್ಯೂನತೆಗಳಿರುವ ಮೃಗಗಳನ್ನು ಬಲಿ ನೀಡುವುದರಿಂದ ತಡೆಯಲಾಗಿದೆ:**

ಪ್ರವಾದಿ(ಸ)ರವರು ಹೇಳಿರುವರು: "ನಾಲ್ಕು ರೀತಿಯ ಮೃಗಗಳು ಧರ್ಮಬದ್ಧವಲ್ಲ":

(أربع لا تجوز في الأضاحي: العوراء بين عورها، والمريضة بين مرضها، والعرجاء بين ظلعها، والكبير التي لا تنقي)

ಸ್ಪಷ್ಟವಾಗಿ ಕಾಣುವ ರೀತಿಯಲ್ಲಿ ಅಂಗವಿಕಲವಾಗಿರುವ ಪ್ರಾಣಿ, ಸ್ಪಷ್ಟವಾಗಿ ಗೋಚರಿಸುವ ಒಕ್ಕಣ್ಣನಾಗಿರುವ ಪ್ರಾಣಿ, ಸ್ಪಷ್ಟವಾಗಿ ಗೋಚರಿಸುವ ರೋಗಪೀಡಿತ ಪ್ರಾಣಿ, ಪ್ರಾಣವಿಲ್ಲದ ಬಲಹೀನ ಪ್ರಾಣಿ (ಅಬೂದಾವೂದ್).

ಪ್ರವಾದಿ(ಸ)ರವರು ಕುರ್ಬಾನಿಗಾಗಿ ಹೆಚ್ಚು ಮಾಂಸವಿರುವ, ಕಾಣಲು ಸುಂದರವಾಗಿರುವ, ಕೊಂಬುಗಳಿರುವ, ಆರೋಗ್ಯಪೂರ್ಣವಾಗಿರುವ ಎರಡು ಕಪ್ಪು ಗಂಡು ಕುರಿಗಳನ್ನು ಖರೀದಿಸಿದ್ದರು ಎಂದು ಹದೀಸ್‌ಗಳಲ್ಲಿ ವರದಿಯಾಗಿದೆ.

ಕುರ್ಬಾನಿ ಮಾಂಸವನ್ನು ಮೂರು ಪಾಲು ಮಾಡಬೇಕು. ಒಂದು ಸ್ವಂತಕ್ಕೆ, ಇನ್ನೊಂದು ಪಾಲು ಉಡುಗೊರೆಯಾಗಿ, ಮತ್ತೊಂದು ಪಾಲು ಬಡಬಗ್ಗರಿಗೆ ದಾನ ಮಾಡಬೇಕು. ಕುರ್ಬಾನಿ ಮಾಂಸವನ್ನು ಮುಸ್ಲಿಮೇತರರಿಗೂ ಕೊಡಬಹುದೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.

ಪ್ರವಾದಿ ಚರ್ಯೆಯ ಪ್ರಕಾರ ಮನೆಯ ಯಜಮಾನನು ಮನೆಯವರ ಪರವಾಗಿ ಕುರ್ಬಾನಿ ಮಾಡಬೇಕು. ಕುಟುಂಬದ ಪ್ರತೀಯೊಬ್ಬರು ಬೇರೆ ಬೇರೆಯಾಗಿ ಬಲಿ ನೀಡಬೇಕೆಂದಿಲ್ಲ. ಪ್ರವಾದಿ(ಸ)ರವರು ತಮ್ಮ ಮತ್ತು ತಮ್ಮ ಕುಟುಂಬದ ಪರವಾಗಿ ಎರಡು ಕುರಿಗಳನ್ನು ಕೊಯ್ದಿದ್ದು ಇದಕ್ಕೆ ಪುರಾವೆಯಾಗಿದೆ. ಪ್ರವಾದಿ ಪತ್ನಿಯರ ಪೈಕಿ ಯಾರೂ ಬಲಿ ನೀಡಿದ್ದಾಗಿ ವರದಿಯಾಗಿಲ್ಲ. ಅವರೆಲ್ಲರೂ ಪ್ರವಾದಿ(ಸ)ರವರು ನಿರ್ವಹಿಸಿದ ಬಲಿಯೊಂದಿಗೇ ಪಾಲುಗೊಳ್ಳುತ್ತಿದ್ದರು.

**ಕುರ್ಬಾನಿಗೆ ನಿಯ್ಯತ್ ಮಾಡಿದವರು ಪಾಲಿಸಬೇಕಾದ ನಿಯಮ:**

ಕುರ್ಬಾನಿ ನೀಡಬೇಕಾದವರು ಈದುಲ್ ಅದ್‌ಹಾದ ನಮಾಝ್‌ನ ನಂತರ ಅಯ್ಯಾಮು ತ್ತಶ್‌ರೀಕ್‌ನ ದಿನಗಳು ಅಂದರೆ, 11, 12, 13ರ ವರೆಗೆ ನೀಡಬಹುದಾಗಿದೆ.

ಬಲಿ ನೀಡಲು ಸಂಕಲ್ಪ ಮಾಡಿದವರು ತಮ್ಮ ಕೂದಲು, ಉಗುರುಗಳನ್ನು ಕತ್ತರಿಸಬಾರದು.

(مَنْ رَأَى هِلَالَ ذِي الْحِجَّةِ وَأَرَادَ أَنْ يُضَحِّيَ فَلَا يَأْخُذْ مِنْ شَعْرِهِ وَلَا مِنْ أَظْفَارِهِ)

ಯಾರಾದರೂ ಕುರ್ಬಾನಿಗೆ ನಿಯ್ಯತ್ ಮಾಡಿದರೆ ಅವರು ಚಂದ್ರದರ್ಶನವಾದ ನಂತರ ಬಲಿ ನೀಡುವವರೆಗೆ ತನ್ನ ಕೂದಲು ಹಾಗೂ ಉಗುರನ್ನು ಕತ್ತರಿಸಬಾರದು (ಮುಸ್ಲಿಮ್).

ಈ ಆದೇಶವು ಕುರ್ಬಾನಿ ನೀಡುವವನಿಗೆ ಮಾತ್ರ ಅನ್ವಯಿಸುತ್ತದೆ. ಆದುದರಿಂದ ಯಾವ ಕುಟುಂಬದ ಪರವಾಗಿ ಅದರ ಯಜಮಾನನು ಕುರ್ಬಾನಿ ನೀಡುತ್ತಾನೋ ಅವನ ಹೊರತು ಇತರರು ಕೂದಲು, ಉಗುರ ಕೀಳುವುದಕ್ಕೆ ಅಡ್ಡಿ ಇಲ್ಲ. ಯಾಕೆಂದರೆ ಪ್ರವಾದಿ(ಸ)ರವರು ನಿರ್ದೇಶಿಸಿದ್ದು ಕುರ್ಬಾನಿ ನೀಡುವವರನ್ನಾಗಿದೆ. ಪ್ರವಾದಿ(ಸ)ರವರು ತನ್ನ ಕುಟುಂಬದ ಪರವಾಗಿ ಕುರ್ಬಾನಿ ನೀಡಿದ್ದರು. ಆದರೆ ಅವರು ಕುಟುಂಬದವರೊಂದಿಗೆ ಕೂದಲು, ಉಗುರು ಕತ್ತರಿಸುವುದರಿಂದ ದೂರ ನಿಲ್ಲಲು ಆದೇಶಿಸಿಲ್ಲ. ಈ ನಿಯಮವು ಕುಟುಂಬದ ಎಲ್ಲರಿಗೂ ಅನ್ವಯಿಸುತ್ತದೆಂದು ಅಭಿಪ್ರಾಯ ಪಡುವವರಲ್ಲಿ ಯಾವುದೇ ಪುರಾವೆ ಇಲ್ಲ.

**ಕುರ್ಬಾನಿಗೆ ಬಲಿ ನೀಡಬೇಕಾದ ಪ್ರಾಣಿಗಳು:**

ಆಡು, ಕುರಿ, ಹಸು, ಒಂಟೆ ಮುಂತಾದ ಪ್ರಾಣಿಗಳನ್ನು ಕುರ್ಬಾನಿ ನೀಡಬಹುದಾಗಿದೆ.

(كُنَّا مَعَ رَسُولِ اللَّهِ ﷺ فِي سَفَرٍ فَحَضَرَ الْأَضْحَى فَاشْتَرَكْنَا فِي الْبَقَرَةِ سَبْعَةً وَفِي الْبَعِيرِ عَشَرَةً)

ಒಮ್ಮೆ ನಾವು ಈದುಲ್ ಅದ್‌ಹಾದ ಸಮಯದಲ್ಲಿ ಪ್ರವಾದಿ(ಸ)ಯವರೊಂದಿಗೆ ಪ್ರಯಾಣದಲ್ಲಿದ್ದೆವು. ನಾವು ಹಸುವನ್ನು ಏಳು ಮಂದಿ ಮತ್ತು ಒಂಟೆಯನ್ನು ಹತ್ತು ಮಂದಿ ಸೇರಿ ಕುರ್ಬಾನಿ ಮಾಡಿದೆವು (ತಿರ್ಮಿದಿ). ಕುರ್ಬಾನಿಯ ಚರ್ಮವನ್ನು ಅದರ ಕೊಯ್ದ ಮಜೂರಿಯಾಗಿ ನೀಡದೆ ಚರ್ಮದ ಹಣವನ್ನು ದಾನ ಮಾಡಬೇಕಾಗಿದೆ.

**ಈದುಲ್ ಅದ್‌ಹಾ:**

ದುಲ್‌ಹಿಜ್ಜಃ ಹತ್ತರ ಈದುಲ್ ಅದ್‌ಹಾವು ಮುಸ್ಲಿಮರ ಎರಡು ಹಬ್ಬಗಳಲ್ಲಿ ಒಂದಾಗಿದೆ. ಅಂದು ಪ್ರತಿಯೊಬ್ಬ ಗಂಡು-ಹೆಣ್ಣು ಈದ್‌ಗಾಹ್‌ನಲ್ಲಿ ಸಮ್ಮೇಳಿಸಿ ಈದ್ ನಮಾಝ್ ನಿರ್ವಹಿಸಿ ಖುತುಬಾ ಆಲಿಸುವುದು ಮಹತ್ವದ ಪುಣ್ಯ ಕರ್ಮವಾಗಿದೆ. ಮುಟ್ಟಾದ ಮಹಿಳೆಯರೂ ಭಾಗವಹಿಸಿ ನಮಾಝಿನ ಹೊರತಾದ ಖುತುಬಾ ಮತ್ತು ದುಆಗಳಲ್ಲಿ ಪಾಲ್ಗೊಳ್ಳಬೇಕು ಎಂದು ಪ್ರವಾದಿ(ಸ)ರವರು ಆದೇಶಿಸಿದ್ದಾರೆ. ಈದುಲ್ ಅದ್‌ಹಾದಂದು ಈದ್‌ಗಾಹ್‌ಗೆ ತೆರಳುವಾಗ ಬರೀ ಹೊಟ್ಟೆಯಲ್ಲಿ ತೆರಳಬೇಕೆಂದೂ ಪ್ರವಾದಿ(ಸ)ರವರ ಆದೇಶವಿದೆ.

(كَانَ النَّبِيُّ ﷺ لَا يَخْرُجُ يَوْمَ الْفِطْرِ حَتَّى يَطْعَمَ، وَلَا يَطْعَمُ يَوْمَ الْأَضْحَى حَتَّى يُصَلِّيَ)

ಪ್ರವಾದಿ(ಸ)ರವರು ಈದುಲ್ ಫಿತ್‌ರ್‌ಗೆ ಏನಾದರೂ ತಿನ್ನದೆ ಹೊರಡುತ್ತಿರಲಿಲ್ಲ. ಈದುಲ್ ಅದ್‌ಹಾದಂದು ನಮಾಝ್ ನಿರ್ವಹಿಸದೆ ಏನನ್ನೂ ತಿನ್ನುತ್ತಿರಲಿಲ್ಲ (ತಿರ್ಮಿದಿ).

ಅಲ್ಲಾಹು ನಮ್ಮೆಲ್ಲರನ್ನೂ ದುಲ್‌ಹಿಜ್ಜಃ ಹತ್ತರ ಮಹತ್ವವನ್ನು ಅರಿತು ಅದರಲ್ಲಿ ಪುಣ್ಯಕರ್ಮವೆಸಗುವವರ ಸಾಲಲ್ಲಿ ಸೇರಿಸಿ ಅನುಗ್ರಹಿಸಲಿ. -ಆಮೀನ್.



# ಮಗನನ್ನು ಬಲಿಗೊಡಬೇಕಾಗಿಲ್ಲ! ಆಕಾಶದಿಂದ ಅಶರೀರವಾಣಿ:

(2ನೇ ಪುಟದಿಂದ)

ಇದುವೇ ಎರಡನೇ ಪರೀಕ್ಷೆ. ಈ ಕಠಿಣ ಪರೀಕ್ಷೆಯಲ್ಲೂ ಅವರು ವಿಜಯಿಯಾದರು.

ಆ ಬಳಿಕ ಫೆಲಸ್ತೀನ್‌ಗೆ ಹಿಜ್ರಾ ಹೋಗಲಿಕ್ಕಾಗಿ ಅಲ್ಲಾಹನ ಆಜ್ಞೆಯಾಯಿತು. ಅದರಂತೆ ಇಬ್ರಾಹೀಮ್(ಅ) ಫೆಲಸ್ತೀನ್‌ಗೆ ಹಿಜ್ರಾ ಹೋದರು. ಅವರೊಂದಿಗೆ ಅವರ ಸಹೋದರ ಪುತ್ರನಾದ ಲೂತ್(ಅ) ಕೂಡಾ ಇದ್ದರು. ಫೆಲೆಸ್ತೀನ್‌ನಲ್ಲಿ ಅವರು ವಾಸಿಸತೊಡಗಿದರು. ಸಾರಾ ಬೀವಿ ಅವರ ಮೊದಲ ಪತ್ನಿಯಾಗಿದ್ದರು. ಆದರೆ ಬಹಳ ವರ್ಷಗಳ ವರೆಗೆ ಅವರಿಗೆ ಮಕ್ಕಳಾಗಲಿಲ್ಲ. ಕೊನೆಗೆ ದ್ವಿತೀಯ ಪತ್ನಿ ಹಾಜರಾಳ ಮೂಲಕ ಅಲ್ಲಾಹು ಅವರಿಗೆ ಇಸ್ಮಾಯೀಲ್ ಎಂಬ ಪುತ್ರನನ್ನು ದಯಪಾಲಿಸುತ್ತಾನೆ. ಹೀಗೆ ಇಬ್ರಾಹೀಮ್(ಅ) ಕುಟುಂಬ ಸಮೇತರಾಗಿ ಫೆಲೆಸ್ತೀನ್‌ನಲ್ಲಿ ವಾಸಿಸುತ್ತಿರುವುದರ ಮಧ್ಯೆ ಪತ್ನಿ ಹಾಜರಾಳನ್ನು ಮತ್ತು ಹಸುಗೂಸು ಇಸ್ಮಾಯೀಲ್‌ರನ್ನು ದೂರದ ಮಕ್ಕಾದಲ್ಲಿ ಬಿಟ್ಟು ಬರಬೇಕೆಂದು ಅಲ್ಲಾಹನ ಆಜ್ಞೆಯಾಗುತ್ತದೆ. ನಿರಾಕರಿಸಲಾಗದು. ಅಲ್ಲಾಹನ ಆಜ್ಞೆಯನ್ನು ಪಾಲಿಸಲು ಅವರು ಸಿದ್ಧರಾದರು. ಚರ್ಮದ ಪಾತ್ರೆ ತುಂಬಾ ನೀರು ಮತ್ತು ಸ್ವಲ್ಪ ಒಣ ಖರ್ಜೂರದೊಂದಿಗೆ ಆ ಕುಟುಂಬ ಮಕ್ಕಾದ ಕಡೆಗೆ ಹೊರಟಿತು. ಬೆಂಕಿಯಂತೆ ಸುಡುತ್ತಿದ್ದ ಮರಳುಗಾಡಿನಲ್ಲಿ ಪ್ರಯಾಣಿಸುತ್ತಾ ತಿಂಗಳುಗಳ ಬಳಿಕ ಅವರು ಮಕ್ಕಾಕ್ಕೆ ತಲುಪಿದರು. ಅಂದು ಮಕ್ಕಾದಲ್ಲಿ ಜನವಾಸವಿರಲಿಲ್ಲ. ಕುಡಿಯಲು ನೀರಾಗಲೀ, ಉಣ್ಣಲು ಆಹಾರ ವಸ್ತುಗಳಾಗಲಿ ಯಾವುದೂ ಇರಲಿಲ್ಲ. ಸಫಾ ಪರ್ವತದ ಕಣಿವೆಯಲ್ಲಿ ವೃಕ್ಷ ಮರವೊಂದರ ಬುಡದಲ್ಲಿ ಪತ್ನಿಯನ್ನೂ ಪುತ್ರನನ್ನೂ ಬಿಟ್ಟು ಇಬ್ರಾಹೀಮ್(ಅ) ಹಿಂತಿರುಗುತ್ತಿದ್ದಂತೆ ಹಾಜರಾ ಕೇಳುತ್ತಾರೆ: "ಯಾರೂ ಇಲ್ಲದ ಈ ನಿರ್ಜನ ಪ್ರದೇಶದಲ್ಲಿ ನನ್ನನ್ನೂ ಈ ಹಸುಗೂಸನ್ನೂ ಬಿಟ್ಟು ತಾವು ಹೋಗುವುದೇ?" ಹಾಜರಾಳ ಪ್ರಶ್ನೆಗೆ ಇಬ್ರಾಹೀಮ್(ಅ) ಉತ್ತರಿಸಲಿಲ್ಲ. ನೋಡಿ, ನಮ್ಮನ್ನು ಇಲ್ಲಿ ಒಬ್ಬಂಟಿಗರಾಗಿ ಬಿಟ್ಟು ಮರಳಿ ಹೋಗಬೇಕೆಂದು ಅಲ್ಲಾಹನ ಆಜ್ಞೆಯಿದೆಯೋ? ಎಂಬ ಹಾಜರಾಳ ಪ್ರಶ್ನೆಯನ್ನು ಕೇಳಿ ತಿರುಗಿದ ಇಬ್ರಾಹೀಮ್(ಅ) ಹೇಳಿದರು: "ಹೌದು ಹಾಜರಾ. ಇದು ಅಲ್ಲಾಹನ ಆಜ್ಞೆಯಾಗಿದೆ. ಅಲ್ಲಾಹನ ಆಜ್ಞೆಯಿದೆಯೆಂದು ಹೇಳಿದೊಡನೆ ಮರು ಮಾತನಾಡದೆ ಅವರು ಹೇಳುತ್ತಾರೆ: "ಸರಿ, ಹಾಗಾದರೆ ತಾವು ಹೋಗಿರಿ. ಅಲ್ಲಾಹು ನಮ್ಮ ಕೈ ಬಿಡಲಾರನು. ಅವನು ನಮಗೆ ಸಹಾಯ ಮಾಡುವನು. ಅಲ್ಲಾಹನ ಕುರಿತಾದ ಪತ್ನಿಯ ಆ ಧೀರ ಮಾತುಗಳಿಂದ

(9ನೇ ಪುಟಕ್ಕೆ)

## ಕುರ್‌ಆನಿನ ಚಿಂತನೆಗಳು - 31

✍ ಅಶ್ರಫಲಿ ನಡುಪದವು

# ಅನಾಥರ ಸೊತ್ತನ್ನು ತಿನ್ನುವವರು

وَآتُوا الْيَتَامَىٰ أَمْوَالَهُمْ وَلَا تَتَبَدَّلُوا الْخَبِيثَ بِالطَّيِّبِ وَلَا تَأْكُلُوا أَمْوَالَهُمْ إِلَىٰ أَمْوَالِكُمْ إِنَّهُ كَانَ حُوبًا كَبِيرًا ②

"ನೀವು ಅನಾಥರ ಸೊತ್ತುಗಳನ್ನು(ಅವರಿಗೆ ಬಿಟ್ಟು)ಕೊಡಿರಿ ಮತ್ತು ನೀವು ಒಳ್ಳೆಯದನ್ನು ಕೆಟ್ಟದ್ದಕ್ಕೆ ಬದಲಿಸಬೇಡಿರಿ ಮತ್ತು ನೀವು ಅವರ ಸೊತ್ತುಗಳನ್ನು ನಿಮ್ಮ ಸೊತ್ತುಗಳೊಂದಿಗೆ (ಸೇರಿಸಿ) ತಿನ್ನಲೂ ಬೇಡಿರಿ. ನಿಶ್ಚಯವಾಗಿಯೂ ಅದೊಂದು ಬಹು ದೊಡ್ಡ ಪಾತಕವಾಗಿದೆ" (ಕುರ್‌ಆನ್ 4:2).

ವೈಯಕ್ತಿಕ ಹಾಗೂ ಸಾಮಾಜಿಕ ಸಂಬಂಧಗಳು ಉತ್ತಮ ರೀತಿಯಲ್ಲಾಗಲಿಕ್ಕಾಗಿ ಸೂಕ್ತವಾದ ನಿಯಮಗಳನ್ನು ಇಸ್ಲಾಮ್ ವ್ಯಕ್ತಪಡಿಸಿದೆ. ಆ ಪೈಕಿ ಒಂದು ಉದಾಹರಣೆಯಾಗಿದೆ ಅನಾಥರ ಕುರಿತಾದ ಆದೇಶಗಳು. ಮಾತಾಪಿತರು ಮರಣ ಹೊಂದಿದ್ದು ಪ್ರಾಯ ಪೂರ್ತಿಯಾದಾಗ ಮಕ್ಕಳು ಮತ್ತು ಉತ್ತರಾಧಿಕಾರದ ಸೊತ್ತುಗಳಿರುವ ಸ್ಥಿತಿಯಲ್ಲಿ ಮತ್ತು ಯಾವುದೇ ಸೊತ್ತುಗಳಿಲ್ಲದ ಸ್ಥಿತಿಯಲ್ಲಿ ಇಸ್ಲಾಮ್ ಅವರ ಅಪ್ತ ಬಂಧುವಿಗೆ ಜವಾಬ್ದಾರಿ ನೀಡುತ್ತದೆ. ತನ್ನ ಮೃತ ಸಹೋದರನ ಮಕ್ಕಳು ನಿರ್ಗತಿಕರಾಗಿದ್ದರೆ ಅವರು ಹಸಿವಿನಿಂದ ಕಂಗೆಡದಂತೆ ಜೀವಿಸುವ ವ್ಯವಸ್ಥೆ ಮಾಡಬೇಕು. ಮಕ್ಕಳ ಅಜ್ಜ ಜೀವಿಸಿದ್ದರೆ ಅತ ತಂದೆಯ ಸ್ಥಾನವನ್ನು ವಹಿಸಿಕೊಳ್ಳಬೇಕು.

ಅನಾಥರು ಸಂಪತ್ತುಳ್ಳವರಾಗಿದ್ದರೆ ಮಾತ್ರ ಅವರೊಂದಿಗಿನ ಸಮಸ್ಯೆಗಳಲ್ಲಿ ತಪ್ಪು ಸಂಭವಿಸುವ ಸಾಧ್ಯತೆ ಹೆಚ್ಚಾಗುತ್ತದೆ. ಅವರು ಪ್ರಾಯಕ್ಕೆ ತಲುಪುವ ವರೆಗೆ ಸಂಪತ್ತನ್ನು ಚೆನ್ನಾಗಿ ಸಂರಕ್ಷಿಸಬೇಕು. ಅವರ ಕೃಷಿಯುತ್ಪನ್ನಗಳೊಂದಿಗೆ ಸಂರಕ್ಷಕನು ತನ್ನ ಕೆಟ್ಟ ಉತ್ಪನ್ನಗಳನ್ನು ಸೇರಿಸಿ ಮಾರುವುದಾಗಲಿ, ಅವುಗಳ ಬದಲಿಗೆ ಒಳ್ಳೆಯದನ್ನು ಬದಲಿಸಿ ತೆಗೆಯುವುದಾಗಲೀ ಮಾಡಬಾರದು. ಹಾಗೆ ಮಾಡಿದರೆ ಆ ಮಕ್ಕಳಿಗೇನೂ ಗೊತ್ತಾಗುವುದಿಲ್ಲ. ಒಂದು ವೇಳೆ ಗೊತ್ತಾದರೂ ವಿಚಾರಿಸಲು ಧೈರ್ಯವಿರಲಿಕ್ಕಿಲ್ಲ. ಆದರೆ ಅಲ್ಲಾಹು ಅದನ್ನು ನೋಡುವನು ಮತ್ತು ವಿಚಾರಣೆ ನಡೆಸುವನು. ಅನಾಥರ ಆದಾಯದ ಮೊತ್ತದಲ್ಲಿ ವ್ಯಾಪಾರ ಮಾಡಿ ಲಾಭ ಗಳಿಸುವ ಮತ್ತು ಅನಾಥರು ಪ್ರಾಯಕ್ಕೆ ಬಂದಾಗ ಮೂಲಧನವನ್ನು ಮಾತ್ರ ಮರಳಿಸುವವರು ಸಮಾಜದಲ್ಲಿದ್ದಾರೆ. ಯತೀಮ್‌ಖಾನಾಗಳನ್ನು ಸ್ಥಾಪಿಸಿ ಯತೀಮ್ ಮಕ್ಕಳ ಹೆಸರಲ್ಲಿ ಕೋಟ್ಯಾಂತರ ರೂ.ಗಳ ಸಂಪತ್ತು ಕ್ರೋಢೀಕರಿಸಿದ ಅನಾಥ ಪ್ರೇಮಿಗಳು ಅನೇಕರಿದ್ದಾರೆ. ಕೆಲವು ಮುಲ್ಲಾ, ಮುಸ್ಲಿಯಾರ್, ತಂಙಳ್‌ಗಳು ಯತೀಮ್‌ಖಾನಾಗಳನ್ನು ಅಪಾರ ಲಾಭ ಗಳಿಸುವ ಉದ್ಯಮವನ್ನಾಗಿ ಮಾಡಿಕೊಂಡಿದ್ದಾರೆ. ಯತೀಮ್‌ಖಾನಾಗಳ ಹೆಸರಲ್ಲಿ ಮಾಡಿಟ್ಟ ಸೊತ್ತುಗಳು ಯತೀಮ್ ಮಕ್ಕಳಿಗೆ ಸೇರಬೇಕು. ಅನಾಥ ಸಂರಕ್ಷಕನು ತನ್ನ ದುಡಿಮೆಯ ಪ್ರತಿಫಲ ಮತ್ತು ಪ್ರಯಾಣದ ವೆಚ್ಚಗಳನ್ನು ಮಾತ್ರ ತೆಗೆಯಬಹುದೇ ವಿನಾ ಬೇರೇನನ್ನೂ ತೆಗೆಯಬಾರದು. ಇದೆಲ್ಲಾ ಜನರ ಧರ್ಮಭಕ್ತಿಗಳು ಪರಿಶೋಧಿಸಲ್ಪಡುವ ಸಂದರ್ಭಗಳಾಗಿವೆ. ಅನಾಥರ ಸಂಪತ್ತನ್ನು ತಿನ್ನುವವರು ತಮ್ಮ ಹೊಟ್ಟೆಯಲ್ಲಿ ತುಂಬುತ್ತಿರುವುದು ಅಗ್ನಿಯನ್ನಾಗಿದೆಯೆಂದು ಕುರ್‌ಆನಿನಲ್ಲಿ ಅಲ್ಲಾಹು ಎಚ್ಚರಿಸಿದ್ದಾನೆ.

(5ನೇ ಪುಟದಿಂದ)

ಕಠಿಣ ಶಿಕ್ಷೆಯಾಗಬೇಕೆಂದು ಜನರು ಬಯಸುತ್ತಾರೆ. ಹಾಗಾದರೆ ಅಪರಾಧಿಗಳಿಗೆ ಅವರವರ ತಪ್ಪಿಗೆ ತಕ್ಕಂತೆ ಶಿಕ್ಷೆಯನ್ನು ಜಾರಿಗೊಳಿಸುವ ನ್ಯಾಯಯುತವಾದ ಪರಿಪೂರ್ಣ ವ್ಯವಸ್ಥೆಯೊಂದು ಈ ಭೂಮಿಯಲ್ಲಿದೆಯೇ?

ಉದಾಹರಣೆಗೆ ಹಿಟ್ಲರನು ದಬ್ಬಾಳಿಕೆಯ ಅವಧಿಯಲ್ಲಿ ಸಾವಿರಾರು ಅಮಾಯಕರನ್ನು ಕೊಂದು ಹಾಕಿದನು. ಒಂದು ವೇಳೆ ಪೊಲೀಸರು ಆತನನ್ನು ಬಂಧಿಸಿದ್ದರೆ ಮಾನವ ನಿರ್ಮಿತ ನ್ಯಾಯ ವ್ಯವಸ್ಥೆಯು ಆತನೆಸಗಿದ ಅಪರಾಧಕ್ಕೆ ಯಾವ ಶಿಕ್ಷೆಯನ್ನು ನಿರ್ಣಯಿಸುತ್ತಿತ್ತು? ಹೆಚ್ಚೆಂದರೆ ಆತನಿಗೆ ಮರಣ ದಂಡನೆ ಅಥವಾ 'ಗ್ಯಾಸ್ ಚೇಂಬರ್' (Gas Chamber)ನ ಒಳಗೆ ಕಳುಹಿಸುವಂತೆ ಆದೇಶಿಸುತ್ತಿತ್ತು. ಈ ರೀತಿ ಮಾಡಿದ್ದರೆ ಕೇವಲ ಓರ್ವ ಯಹೂದಿಯನ್ನು ಕೊಂದುದಕ್ಕೆ ಶಿಕ್ಷೆ ನೀಡಿದಂತಾಗುತ್ತಿತ್ತೇ ವಿನಃ ಸಾವಿರಾರು ಯಹೂದಿಯರ ಪ್ರಾಣಹರಣಕ್ಕೆ ನ್ಯಾಯ ಒದಗಿಸಿದಂತಾಗುತ್ತಿರಲಿಲ್ಲ. ಸಾವಿರಾರು ಯಹೂದಿಯರನ್ನು ಕೊಲೆಗೈದ 'ಹಿಟ್ಲರ್'ನನ್ನು ಸಾವಿರ ಸಲ ನೇಣುಗಂಬಕ್ಕೇರಿಸಿ ಮರಣದ ರುಚಿ ಅನುಭವಿಸುವಂತೆ ಮಾಡುವ ನ್ಯಾಯ ವ್ಯವಸ್ಥೆಯೊಂದನ್ನು ಈ ಭೂಮಿಯಲ್ಲಿ ಸ್ಥಾಪಿಸಲು ಸಾಧ್ಯವೇ?

ಸಾಬೀತಾದ ಅಪರಾಧಿಗಳಿಗೆ ಕೆಲವೊಮ್ಮೆ ನ್ಯಾಯಾಧೀಶರು ಎರಡೆರಡು ಬಾರಿ 'ಜೀವಾವಧಿ' ಶಿಕ್ಷೆಯನ್ನು ವಿಧಿಸಿರುವ ಸನ್ನಿವೇಶಗಳಿವೆ. ಕೆಲವೊಮ್ಮೆ ಇದು 'ನೂರು' ವರ್ಷಕ್ಕಿಂತಲೂ ಅಧಿಕವಾಗಿರುವುದು. ಇದು ಅಪರಾಧಿಯ ಅಪರಾಧದ ಮೇರೆಗೆ ನ್ಯಾಯಾಧೀಶರು ನಿರ್ಣಯಿಸುವ ತೀರ್ಮಾನವಾಗಿರುತ್ತದೆ.

ಇಂತಹ ಸಂದರ್ಭದಲ್ಲಿ ಅಪರಾಧಿಯು ತನ್ನ ಶಿಕ್ಷೆಯ ಅವಧಿಯನ್ನು ಪೂರ್ಣಗೊಳಿಸುತ್ತಾನೆಂದು ಖಾತ್ರಿಯಾಗಿ ಹೇಳುವುದು ನಮ್ಮಿಂದ ಸಾಧ್ಯವೇ?

ನೈಜ, ಪರಿಪೂರ್ಣ ಮತ್ತು ನಿಷ್ಪಕ್ಷವಾದ ನ್ಯಾಯವೆಂದರೆ ಅನ್ಯಾಯ ಅಥವಾ ಅಕ್ರಮಕ್ಕೆ ಒಳಗಾದವರ ಸಮ್ಮುಖದಲ್ಲೇ ನ್ಯಾಯ ಒದಗಿಸುವ ವ್ಯವಸ್ಥೆಯೊಂದು ಇರಬೇಕು. 'ಹಿಟ್ಲರ್'ನಿಂದ ಸಾಮೂಹಿಕವಾಗಿ ಹತ್ಯೆಗೀಡಾದ ಆ ಮುಗ್ಧ ಜನರಿಗೆ ಯಾವ ರೀತಿಯ ಪರಿಹಾರವನ್ನು ನೀಡಲು ಸಾಧ್ಯ? ಅವರಿಗೆ ನ್ಯಾಯ ಒದಗಿಸಲು ಅವರಿಂದು ಜೀವಂತವಿರುವರೇ? ಸತ್ಕರ್ಮವೆಸಗುತ್ತಿದ್ದ ಅನೇಕ ಸಜ್ಜನರನ್ನು ವಿನಾ ಕಾರಣ ಹಿಂಸಿಸಿ ಅವರನ್ನು ಕೊಲೆ ಮಾಡಿದ ಉದಾಹರಣೆಗಳು ಇತಿಹಾಸದಲ್ಲಿ ನಮಗೆ ಕಾಣಸಿಗುತ್ತವೆ. ಈ ರೀತಿ ತಮ್ಮ ಜೀವನವನ್ನು ಕಳೆದುಕೊಂಡ ಮಹಾನ್ ವ್ಯಕ್ತಿಗಳಿಗೆ ಅವರ ಸತ್ಕರ್ಮಗಳ ಪರಿಹಾರವನ್ನು ನೀಡಬೇಕೆಂದು ನೀವು ಚಿಂತಿಸುವುದಿಲ್ಲವೇ?

ಈ ಜೀವನದಲ್ಲಿ ನಾವೆಸಗಿದ ಕರ್ಮಗಳಿಗೆ ನ್ಯಾಯಯುತವಾದ ಪ್ರತಿಫಲ ದೊರೆಯುವಂತಾಗಬೇಕಾದರೆ ಮರಣಾನಂತರ ಜೀವನವೊಂದರ ಅಗತ್ಯತೆಯಿದೆ ಎಂಬುವುದನ್ನು ಯಾವ ಬುದ್ಧಿಜೀವಿಯೂ ಅಲ್ಲಗಳೆಯಲಾರನು.

ಪುನರುತ್ಥಾನ ಅಥವಾ ನಿರ್ಣಾಯಕ ದಿನದಂದು ಸೃಷ್ಟಿಕರ್ತನಾದ ದೇವನು ಸತ್ಕರ್ಮವೆಸಗಿದವರಿಗೆ ಉತ್ತಮ ಪ್ರತಿಫಲವನ್ನೂ ಮತ್ತು ದೇವ-ಧಿಕ್ಕಾರಿಗಳಿಗೆ ಶಿಕ್ಷೆಯನ್ನೂ ನೀಡುವ ವ್ಯವಸ್ಥೆಯೊಂದನ್ನು ಸ್ಥಾಪಿಸುವನು. ಅವನು ತನ್ನ ಸೃಷ್ಟಿಗಳ ಮೇಲೆ ಎಂದೂ ಅನ್ಯಾಯವೆಸಗಲಾರನು.

ಸ್ವರ್ಗ ಮತ್ತು ನರಕದ ಜೀವನವು ಶಾಶ್ವತವಾದ ಕಾರಣ, ಹಿಟ್ಲರ್ ಅಥವಾ ಆತ್ಮಾಹುತಿ ದಾಳಿಗಳ ಮೂಲಕ ಸಾವಿರಾರು ಮುಗ್ಧ ಜನರ ಬಲಿ ತೆಗೆದುಕೊಂಡ ಅಪರಾಧಿಗಳಿಗೆ ಅವರ ತಪ್ಪಿಗೆ ಅನುಗುಣವಾಗಿ ಶಿಕ್ಷೆಯನ್ನು ನೀಡುವುದು ಕಷ್ಟಕರವಲ್ಲ. ಅವರಿಗೆ ತಮ್ಮ ಕರ್ಮಫಲಗಳ ರುಚಿಯನ್ನು ಅನುಭವಿಸುವಂತಹ ವ್ಯವಸ್ಥೆಯನ್ನು ಸೃಷ್ಟಿಕರ್ತನು 'ನಿರ್ಣಾಯಕ ದಿನ'ದಂದು ಸ್ಥಾಪಿಸುವನು. ಅದೇ ರೀತಿ ಅನ್ಯಾಯಕ್ಕೊಳಗಾಗಿ ವಿನಾ ಕಾರಣ ತಮ್ಮ ಪ್ರಾಣವನ್ನು ಕಳೆದುಕೊಂಡ ಮುಗ್ಧ ಹಾಗೂ ಸಜ್ಜನರಿಗೆ ಅವರು ಬಯಸುವ ಎಲ್ಲಾ ರೀತಿಯ ಪರಿಹಾರವನ್ನೂ ದೇವನು ನೀಡುವನು.

# ಮಾನವ ಸೃಷ್ಟಿಯ ಉದ್ದೇಶವೇನು?

**ಮರಣಾನಂತರ ಜೀವನ ಸಾಧ್ಯವೇ?**

ವಸ್ತುವೊಂದಕ್ಕೆ ಪ್ರಥಮ ಬಾರಿ ರೂಪ ಕೊಡುವುದು ಕಷ್ಟಕರವಾಗಿದೆ. ಆದರೆ ಅದೇ ವಸ್ತುವಿನ ರಚನೆಯನ್ನು ಪುನರಾವರ್ತಿಸುವುದು ಅಷ್ಟೇ ಸರಳವಾಗಿರುವುದು ಎಂಬುದು ನಮಗೆಲ್ಲ ತಿಳಿದಿರುವ ವಿಚಾರ. ಹಾಗಾದರೆ ನಮ್ಮನ್ನು ಮೊದಲ ಬಾರಿ ಸೃಷ್ಟಿಸಿರುವ ಸರ್ವಶಕ್ತನಾದ ದೇವನು, ನಾವು ಮರಣ ಹೊಂದಿದ ಬಳಿಕ ಪುನಃ ನಮ್ಮನ್ನು ಜೀವಂತಗೊಳಿಸುವುದು ಅವನಿಗೆ ಕಷ್ಟಕರವಾದೀತೇ? ಇಲ್ಲ, ಸಾವಿನಿಂದ ಮರಳಿಸಿ ಜೀವ ಕೊಡುವುದು ದೇವನಿಗೆ ಬಹಳ ಸುಲಭ.

**ದೇವನು ಕ್ಷಮಿಸದಿರುವ ಒಂದು 'ಮಹಾಪಾಪ' ಯಾವುದು?**

ಸತ್ಯ ತಿಳಿದ ಬಳಿಕ ಯಾರು ಈ ಕೆಳಕಂಡ ಕಾರ್ಯಗಳನ್ನೆಸಗುವವರನ್ನು ದೇವನು ಕ್ಷಮಿಸುವುದಿಲ್ಲ:

1. ದೇವನಿಗೆ ಸಮಾನರೆಂದು ತಿಳಿದು ಇತರರನ್ನು ಆರಾಧಿಸುವುದು ಅಥವಾ ವಿಧೇಯರಾಗಿರುವುದು, ಪ್ರಾರ್ಥಿಸುವುದು ಅಥವಾ ಅವರ ಮುಂದೆ ತಲೆ ಬಾಗುವುದು, ಸಾಷ್ಟಾಂಗವೆಸಗುವುದು. ಉದಾ: ನೀರು, ಗಾಳಿ, ಅಗ್ನಿ, ಮೂರ್ತಿ-ಚಿತ್ರಗಳು, ಸಂತರ ಅಥವಾ ಸಜ್ಜನರ ಗೋರಿ, ಇತ್ಯಾದಿ ನೈಸರ್ಗಿಕ ಹಾಗೂ ಮಾನವ ನಿರ್ಮಿತ ವಸ್ತುಗಳ ಪೂಜೆ-ಆರಾಧನೆ ಇತ್ಯಾದಿ.
2. ಮನುಷ್ಯನನ್ನು 'ದೇವಪುತ್ರ' ಅಥವಾ 'ದೇವಪತ್ನಿ'ಯೆಂದು ಸಂಭೋದಿಸುವುದರ ಮೂಲಕ ಆತನನ್ನು ಪವಿತ್ರವಾದ 'ದೇವ'ನ ಸ್ಥಾನಕ್ಕೇರಿಸುವುದು. ಹೀಗೆ ಮನುಷ್ಯನೂ ದೇವನಿಗೆ ಸರಿಸಾಟಿಯಾದ ಗುಣಗಳನ್ನು ಹೊಂದಿರುವನು ಎಂಬ ನಂಬಿಕೆ ಹೊಂದುವುದು.
3. ದೇವನಲ್ಲಿ ಅಪನಂಬಿಕೆ ಇಡುವುದು.

**'ಇಸ್ಲಾಮ್' ಎಂಬ ಪದದ ಅರ್ಥವೇನು?**

ಇಸ್ಲಾಮ್ ಧರ್ಮವು ಪ್ರವಾದಿ ಮುಹಮ್ಮದರು(ಇವರ ಮೇಲೆ ಶಾಂತಿ ಇರಲಿ) ಸ್ಥಾಪಿಸಿದಂತಹ ಹೊಸ ಧರ್ಮವೇನಲ್ಲ. 'ಇಸ್ಲಾಮ್' ಎನ್ನುವುದು ಅರಬಿ ಭಾಷೆಯ ಪದವಾಗಿದೆ. ಇದರರ್ಥವು ದೇವನಿಗೆ ವಿಧೇಯರಾಗಿರುವುದು ಅಥವಾ ದೇವನ ಇಚ್ಛೆಗೆ ಶರಣಾಗುವುದೆಂದಾಗಿದೆ. ಎಲ್ಲಾ ಪ್ರವಾದಿಗಳು ಈ ಜೀವನ ರೀತಿಯನ್ನೇ ಬೋಧಿಸಿದರು. ದೇವನಿಗೆ ವಿಧೇಯರಾಗಿರುವುದನ್ನು ಅರಬಿ ಭಾಷೆಯಲ್ಲಿ ಇಸ್ಲಾಮ್ ಎಂದು ಹೇಳಲಾಗುತ್ತದೆ.

**'ಮುಸ್ಲಿಮ್' ಎಂದರೆ ಯಾರು?**

ಯಾರು ಸೃಷ್ಟಿಕರ್ತನ ಆಜ್ಞೆಗೆ ತನ್ನನ್ನು ಸಮರ್ಪಿಸಿ ಇಸ್ಲಾಮ್ ಧರ್ಮವನ್ನು ಅನುಸರಿಸುತ್ತಾನೋ, ಆತನನ್ನು 'ಮುಸ್ಲಿಮ್' ಎಂದು ಕರೆಯಲಾಗುತ್ತದೆ. ಇದೂ ಸಹ ಅರಬ್ಬಿ ಭಾಷೆಯ ಪದವಾಗಿದೆ. ಯಾವ ರೀತಿ ವಾಹನ ಚಲಾಯಿಸುವವನು ಚಾಲಕನೆನಿಸಿಕೊಳ್ಳುವನೋ, ಹಾಡನ್ನು ಹಾಡುವವನು ಹಾಡುಗಾರನೆಂದು ಕರೆಯಲ್ಪಡುವನೋ ಹಾಗೆಯೇ 'ಇಸ್ಲಾಮ್'ನ್ನು ಅನುಸರಿಸುವವನು 'ಮುಸ್ಲಿಮ್' ಎಂದು ಕರೆಯಲ್ಪಡುತ್ತಾನೆ. ನೀವು ದೇವನ ಆಜ್ಞಾನುವರ್ತಿಯಾಗಿ, ಅವನೊಬ್ಬನನ್ನೇ ಆರಾಧಿಸುವುದಾದರೆ ನಿಮ್ಮನ್ನು ಸಹ ಅರಬಿ ಭಾಷೆಯಲ್ಲಿ ಮುಸ್ಲಿಮ್ ಎಂದು ಕರೆಯಲಾಗುತ್ತದೆ.

**'ಅಲ್ಲಾಹ'ನು ಯಾರು? ಅವನು ಮುಸ್ಲಿಮರಿಗೆ ಮಾತ್ರ ದೇವನೇ?**

'ಅಲ್ಲಾಹ'ನು ಮುಸಲ್ಮಾನರಿಗೆ ಮಾತ್ರ ದೇವನು ಎಂದು ಹೆಚ್ಚಿನವರು ಭಾವಿಸುತ್ತಾರೆ. ಇದೊಂದು ತಪ್ಪು ಕಲ್ಪನೆಯಾಗಿದೆ. 'ಅಲ್ಲಾಹ್' ಎಂಬುದು ಅರಬಿ ಪದ. ಇದರ ಅರ್ಥ 'ದೇವನು' ಎಂದಾಗಿದೆ. ಅರಬ್ಬಿ ಭಾಷೆ ಮಾತನಾಡುವ ಯಹೂದಿ ಮತ್ತು ಕ್ರೈಸ್ತರೂ 'ದೇವರು' ಎಂದು ಸೂಚಿಸಲು 'ಅಲ್ಲಾಹ್' ಎಂಬ ಪದವನ್ನೇ ಬಳಸುತ್ತಾರೆ.

ನೀರು(ಕನ್ನಡ), ವಾಟರ್ (ಇಂಗ್ಲೀಷ್), ಪಾನಿ(ಹಿಂದಿ), ಮಾಅ(ಅರೇಬಿಕ್) ಎಲ್ಲವೂ ಒಂದೇ ವಸ್ತುವನ್ನು ಸೂಚಿಸುತ್ತವೆ. ಹೀಗೆ ಕೇವಲ ಸೂಚಿಸಲು ಉಪಯೋಗಿಸುವ ಭಾಷೆಯ ಬದಲಾವಣೆಯಿಂದ ಒಂದು ಲೋಟದಲ್ಲಿರುವ ನೀರು ತನ್ನ ಗುಣವನ್ನು ಬದಲಾಯಿಸಲು ಸಾಧ್ಯವಿಲ್ಲ. ದೇವನು(ಕನ್ನಡ), ಗಾಡ್ (ಇಂಗ್ಲೀಷ್), ಈಶ್ವರ್(ಹಿಂದಿ) ಮತ್ತು ಅಲ್ಲಾಹ್(ಅರೆಬಿಕ್) ಎಲ್ಲವೂ ನಮ್ಮ, ನಿಮ್ಮೆಲ್ಲರನ್ನು ಸೃಷ್ಟಿಸಿದ ಜಗದೊಡೆಯನನ್ನೇ ಸೂಚಿಸುತ್ತವೆ.

**ಮೇಲೆ ತಿಳಿಸಿರುವ ಎಲ್ಲಾ ಚರ್ಚೆಗಳಿಗೆ ಖುರ್‌ಆನ್ ಸಾಕ್ಷಿ:**

ನಮ್ಮೆಲ್ಲರ ಸೃಷ್ಟಿಕರ್ತನಾದ ಅಲ್ಲಾಹನಿಂದ ಅಂತ್ಯ ಪ್ರವಾದಿ ಮುಹಮ್ಮದ್(ಅವರ ಮೇಲೆ ಶಾಂತಿಯಿರಲಿ)ರ ಮೇಲೆ ಅವತೀರ್ಣವಾದ ದಿವ್ಯವಾಣಿಯ ಸಂಗ್ರಹವನ್ನೇ 'ಖುರ್'ಆನ್' ಎನ್ನಲಾಗುತ್ತದೆ. ಇದು ಮಾನವನಿಗೆ ಮಾರ್ಗದರ್ಶಕ ಕೈಪಿಡಿಯಾಗಿದೆ. ಹಲವರು ತಿಳಿದಿರುವ ಹಾಗೆ ಪ್ರವಾದಿ ಮುಹಮ್ಮದರು ಖುರ್'ಆನಿನ ಲೇಕಕರಲ್ಲ. ಖುರ್'ಆನಿನ ಪ್ರತಿಯೊಂದು ವಾಕ್ಯವೂ ದೇವನಿಂದ ಅವತೀರ್ಣಗೊಂಡಿರುವಂತಹದ್ದಾಗಿದೆ ಮತ್ತು 1400 ವರ್ಷಗಳಿಂದ ಇದು ಬದಲಾವಣೆಗೆ ತುತ್ತಾಗದೇ ತನ್ನ ನೈಜ ಸ್ಥಿತಿಯಲ್ಲಿಯೇ ಉಳಿದಿದೆ.

'ನನ್ನಲ್ಲಿ ಒಂದಾದರೂ ತಪ್ಪು ಹುಡುಕಿ ತೋರಿಸಿ' ಎಂದು ಖುರ್'ಆನ್ ಸವಾಲು ಹಾಕುತ್ತದೆ.

ಖುರ್'ಆನಿನ ಕರ್ತೃ ಹೇಳುತ್ತಾನೆ "ಅವರೇನು ಖುರ್'ಆನ್‌ನ ಕುರಿತು ಚಿಂತನೆ ನಡೆಸುವುದಿಲ್ಲವೇ? ಒಂದು ವೇಳೆ ಇದು ಅಲ್ಲಾಹನ ಹೊರತು ಇತರರಿಂದ ಬಂದಿರುತ್ತಿದ್ದರೆ, ಅವರಿಗೆ ಅದರಲ್ಲಿ ಅನೇಕ ತಪ್ಪುಗಳು ಮತ್ತು ವಿರೋಧಾಭಾಸಗಳು ಕಾಣ ಸಿಗುತ್ತಿದ್ದವು". ಖುರ್'ಆನ್ ಅಧ್ಯಾಯ 4, ಸೂಕ್ತಿ 82.

ಖುರ್'ಆನ್ ಭೂಶಾಸ್ತ್ರ, ಭ್ರೂಣಶಾಸ್ತ್ರ, ಖಗೋಳ ಶಾಸ್ತ್ರ, ಸಮುದ್ರ ಶಾಸ್ತ್ರ, ಕಾನೂನುಶಾಸ್ತ್ರ, ಮನಃಶಾಸ್ತ್ರ, ಸಸ್ಯಶಾಸ್ತ್ರ, ಭೌತಶಾಸ್ತ್ರ, ಪ್ರಾಣಿಶಾಸ್ತ್ರ ಇತ್ಯಾದಿ ವಿವಿಧ ವಿಭಾಗಗಳ ಬಗ್ಗೆ ಮಾತನಾಡುತ್ತದೆ. ಆಶ್ಚರ್ಯಕರ ವಿಷಯವೇನೆಂದರೆ, 21ನೇ ಶತಮಾನದಲ್ಲಿ ಸಂಶೋಧಿಸಲ್ಪಟ್ಟ ಹಲವಾರು ವೈಜ್ಞಾನಿಕ ಅಂಶಗಳನ್ನು ಖುರ್'ಆನ್ 1400 ವರ್ಷಗಳ ಹಿಂದೆಯೇ ಅತ್ಯಂತ ನಿಖರವಾಗಿ ತಿಳಿಸಿದೆ ಮತ್ತು ಇಂತಹ ಸಂಶೋಧನೆಗಳನ್ನು ಕೈಗೊಳ್ಳುವುದು ಮಾನವರಾದ ಪ್ರವಾದಿ ಮುಹಮ್ಮದ್(ಅವರ ಮೇಲೆ ಶಾಂತಿ ಯಿರಲಿ)ರವರಿಂದ ಅಸಾಧ್ಯವಾಗಿದೆ.

**ಅಂತಿಮ ಮಾತು:**

ತಮ್ಮ ಅಮೂಲ್ಯವಾದ ಸಮಯವನ್ನು ಈ ಕಿರು ಲೇಖನವನ್ನು ಓದಲು ಕಳೆದುದಕ್ಕಾಗಿ ಧನ್ಯವಾದಗಳು. ಯಾವುದೇ ವ್ಯಕ್ತಿಯನ್ನು ಗುರಿಯಾಗಿರಿಸಿ ಅಥವಾ ಒಂದು ಧರ್ಮದ ಅನುಯಾಯಿಗಳನ್ನು ಮನನೋಯಿಸುವಂತಹ ಉದ್ದೇಶದಿಂದ ಈ ಕೈಪಿಡಿಯನ್ನು ರಚಿಸಲಾಗಿಲ್ಲ. ದೇವನ ಸಂದೇಶವನ್ನು ಮಾನವ ಕೋಟಿಗೆ ತಲುಪಿಸುವುದರ ಜೊತೆಗೆ ನಮ್ಮ ಜೀವನದ ನೈಜ ಉದ್ದೇಶವನ್ನು ಅರಿತುಕೊಳ್ಳುವ ಸಲುವಾಗಿ ಮಾತ್ರ ಈ ಲೇಖನವನ್ನು ತಮ್ಮ ಮುಂದಿಡುತ್ತಿದ್ದೇವೆ. ನಮ್ಮೆಲ್ಲರ ಜೀವನದ ಉದ್ದೇಶವು ಒಂದೇ ಆದಾಗ, ದೇವನ ಆದೇಶದಂತೆ ಅವನಿಗೆ ಅಧೀನರಾಗಿ ಜೀವನ ಸಾಗಿಸುವುದರಿಂದ ನಾವಿರುವ ಸಮಾಜವು ಬದಲಾಗುವುದರೊಂದಿಗೆ ಈ ಜಗತ್ತು ಮಾನವರು ನೆಲೆಯೂರಲು ಅತ್ಯಂತ ಯೋಗ್ಯ ಸ್ಥಳವಾಗಿ ರೂಪುಗೊಳ್ಳುವುದು ಎಂಬುವುದರಲ್ಲಿ ಯಾವುದೇ ಸಂಶಯವಿಲ್ಲ.




ಕರ್ನಾಟಕ ದಅ್‌ವಾ ಸೆಂಟರ್ಸ್ ಅಸೋಸಿಯೇಶನ್
Karna/taka Da'wah Centers, Association
Ph.: 9343430805, 9686667253




✍ ಪ್ರೊ ಪಿ. ಅಬ್ದುಲ್ಲ. ಕನ್ನಡಕ್ಕೆ: ಇಬ್‌ನು ಮೊಹಿದ್ದೀನ್

# ಕೋಪ ಕೂಡದು

قَالَ الله تعالى: وَإِمَّا يَنزَغَنَّكَ مِنَ ٱلشَّيْطَٰنِ نَزْغٌ فَٱسْتَعِذْ بِٱللَّهِ إِنَّهُۥ هُوَ ٱلسَّمِيعُ ٱلْعَلِيمُ ﴿٣٦﴾

ಅಲ್ಲಾಹು ಹೇಳುತ್ತಾನೆ: "ನಿಮ್ಮನ್ನು ಶೈತಾನನ ದುಷ್ಪ್ರೇರಣೆಯೇನಾದರೂ ಪ್ರಚೋದಿಸುವುದಾದರೆ ಆಗ ನೀವು ಅಲ್ಲಾಹನೊಡನೆ ರಕ್ಷಣೆ ಬೇಡಿರಿ. ನಿಶ್ಚಯವಾಗಿಯೂ ಅವನು (ಎಲ್ಲವನ್ನೂ ಆಲಿಸುವವನೂ ಅರಿಯುವವನೂ ಆಗಿರುತ್ತಾನೆ" (ಸೂರಾಃ ಫುಸ್ಸಿಲತ್ 36).

وَقَالَ سُلَيْمَانُ بْنُ صُرَد: كُنْتُ جَالِسًا مَعَ رَسُولِ الله ﷺ وَرَجُلَانِ يَسْتَبَّانِ، وَأَحَدُهُمَا قَدْ أَحْمَرَّ وَجْهُهُ، وَانْتَفَخَتْ أَوْ دَاجُهُ. فَقَالَ رَسُولُ الله ﷺ (إِنِّي لأَعْلَمُ كَلِمَةً لَوْ قَالَهَا لَذَهَبَ عَنْهُ مَا يَجِدُ، لَوْ قَالَ: (أَعُوذُ بِالله مِنَ الشَّيْطَانِ الرَّجِيمِ.) ذَهَبَ عَنْهُ مَا يَجِدُ (البخاري ومسلم)

ಸುಲೈಮಾನುಬ್‌ನು ಸ್ವುರತ್ ಹೇಳಿದರು: "ನಾನು ರಸೂಲುಲ್ಲಾಹಿ(ಸ)ರೊಂದಿಗೆ ಕುಳಿತಿದ್ದೆ. ಇಬ್ಬರು ವ್ಯಕ್ತಿಗಳು ಪರಸ್ಪರ ಅವಾಚ್ಯವಾಗಿ ಮಾತನಾಡ ತೊಡಗಿದರು. ಅವರಲ್ಲೊಬ್ಬರ ಮುಖ ಕೆಂಪೇರಿತ್ತು ಮತ್ತು ಕಂಠನಾಡಿಗಳು ಬೀಗಿದ್ದವು. ಆಗ ರಸೂಲರುಲ್ಲಾಹಿ(ಸ)ರು ಹೇಳಿದರು - ನನಗೆ ಕೆಲವು ವಚನಗಳು ತಿಳಿದಿವೆ. ಅದನ್ನು ಆತ ಹೇಳುವುದಾದರೆ ಆತ ಸಿಲುಕಿರುವ ದುರಾವಸ್ಥೆಯು ಆತನಿಂದ ದೂರವಾಗಬಹುದು. ಅದೇನೆಂದರೆ - 'ಶಪಿಸಲ್ಪಟ್ಟ ಶೈತಾನನಿಂದ ನಾನು ಅಲ್ಲಾಹನಲ್ಲಿ ರಕ್ಷಣೆ ಬೇಡುತ್ತೇನೆ' (ಎಂಬ ವಚನ). ಆತ ಸಿಲುಕಿದ್ದ ದುರಾವಸ್ಥೆ ಆತನಿಂದ ದೂರವಾಯಿತು" (ಬುಖಾರಿ, ಮುಸ್ಲಿಮ್).

قَالَ رَسُولُ الله ﷺ: لَيْسَ الشَّدِيدُ بِالصُّرَعَةِ، إِنَّمَا الشَّدِيدُ الَّذِي يَمْلِكُ نَفْسَهُ عِنْدَ الغَضَبِ. (البخاري)

ರಸೂಲುಲ್ಲಾಹಿ(ಸ)ರು ಹೇಳಿದರು: "ಕುಸ್ತಿ ಹಿಡಿಯುವವನಲ್ಲ ಶಕ್ತಿವಂತ. ಖಂಡಿತವಾಗಿಯೂ ಕೋಪದ ಸಂದರ್ಭದಲ್ಲಿ ತನ್ನ ಮನಸ್ಸನ್ನು ನಿಯಂತ್ರಿಸುವವನೇ ಶಕ್ತಿವಂತನು" (ಬುಖಾರಿ).

اِنَّ رَجُلاً قَالَ لِرَسُولِ الله ﷺ أَوْصِنِي وَلاَ تُكْثِرْ عَلَيَّ، قَالَ: لاَتَغْضَبْ (البخاري)

ಒಬ್ಬರು ರಸೂಲುಲ್ಲಾಹಿ(ಸ)ರೊಂದಿಗೆ ಹೇಳಿದರು: "ತಾವು ನನಗೆ ಸಣ್ಣ ರೀತಿಯಲ್ಲಿ ಉಪದೇಶಿಸಿರಿ" ಅವರು ಹೇಳಿದರು: "ನೀನು ಕೋಪಿಸಬೇಡ" (ಬುಖಾರಿ). (ಮುಂದುವರಿಯುವುದು)

# ಪ್ರವಾದಿ ಮುಹಮ್ಮದ್(ಸ)ರ ವಿವಾಹಗಳು

(3ನೇ ಪುಟದಿಂದ)

ತಮ್ಮನ್ನು ವಿವಾಹವಾಗಬೇಕೆಂದು ಕೆಲವು ಸ್ತ್ರೀಯರು ಪ್ರವಾದಿ(ಸ)ರೊಂದಿಗೆ ಅಪೇಕ್ಷಿಸಿದ್ದು ಪ್ರವಾದಿ(ಸ)ರೊಂದಿಗೆ ದಾಂಪತ್ಯ ಭಾಗ್ಯ ಸಿಗಬೇಕೆಂಬ ಅತಿಯಾದ ಆಶೆಯಿಂದಾಗಿತ್ತೇ ವಿನಾ ಯಾವುದೇ ಲೌಕಿಕ ಸುಖ-ಸೌಕರ್ಯಗಳಿಗಾಗಿ ಆಗಿರಲಿಲ್ಲ. ಸೂರಾಃ ಅಲ್‌ಅಹ್‌ಝಾಬ್‌ನ 50ನೇ ವಚನದಲ್ಲಿ ಹೇಳಿದಂತೆ ವಿವಾಹ ಧನ(ಮಹ್ರ್)ವಿಲ್ಲದೆ ಅಂತಹವರನ್ನು ವಿವಾಹವಾಗಲು ಪ್ರವಾದಿ(ಸ)ರಿಗೆ ಅಲ್ಲಾಹು ಅನುಮತಿ ನೀಡಿದ್ದು ಅದಕ್ಕಾಗಿಯೇ. "ನಿಮಗೆ ಬೇಕಾಗಿರುವುದು ಅಲ್ಲಾಹು ಮತ್ತು ರಸೂಲರೇ ಅಥವಾ ಲೌಕಿಕ ಸುಖವೇ" ಎಂದು ಕೇಳಲಾದಾಗ ಎಲ್ಲಾ ಪತ್ನಿಯರು "ನಮಗೆ ಅಲ್ಲಾಹು ಮತ್ತು ರಸೂಲರು ಸಾಕು" ಎಂದು ಹೇಳಿದ್ದು ಮತ್ತು ಸೌದ(ರ)ರನ್ನು ಪ್ರವಾದಿ(ಸ)ರು ವಿಚ್ಛೇಧಿಸಲಿಚ್ಛಿಸಿದಾಗ "ನನ್ನನ್ನು ಬಿಡುಗಡೆ ಮಾಡಬೇಡಿ, ತಮ್ಮ ಪತ್ನಿಯೆಂಬ ಹೆಸರನ್ನು ಉಳಿಸಿ ಜೀವಿಸಿದರೆ ಸಾಕು" ಎಂದು ಸೌದ(ರ) ಭಿನ್ನವಿಸಿದ್ದೆಲ್ಲಾ ಇದೇ ಕಾರಣದಿಂದಾಗಿದೆ.

ಅದೇ ರೀತಿ ಈ ವಿಷಯವಾಗಿ ಬಹಳಷ್ಟು ಉಲ್ಲೇಕಿಸಲಿಕ್ಕಿದೆ. ಸಂಕ್ಷಿಪ್ತವಾಗಿ ಹೇಳುವುದಾದರೆ, ಪ್ರವಾದಿ(ಸ)ರು ಹೆಚ್ಚು ಪತ್ನಿಯರನ್ನು ಹೊಂದಿರುವುದರಲ್ಲಿ ಅಡಗಿರುವ ರಹಸ್ಯವನ್ನು ಕೂಲಂಕುಶವಾಗಿ ಪರಿಶೋಧಿಸಿದರೆ, ಅವರು ಒಂಬತ್ತು ಅಥವಾ ಹತ್ತು ವಿವಾಹವಾಗಿರುವುದರಲ್ಲಿ ಆಶ್ಚರ್ಯ ಪಡಲು ಅವಕಾಶವಿಲ್ಲ. ಬದಲು ಅದಕ್ಕಿಂತ ಹೆಚ್ಚು ವಿವಾಹವಾಗದಿರುವುದರಲ್ಲಿ ಮತ್ತು ಇನ್ನು ಹೊಸದಾಗಿ ವಿವಾಹವಾಗಬಾರದೆಂದು (ಸೂರಾಃ ಅಹ್‌ಝಾಬ್ 50). ಅಲ್ಲಾಹು ಸೂಚಿಸಿದ್ದರಲ್ಲಿ ಆಶ್ಚರ್ಯ ಪಡಲು ಅವಕಾಶವಿದೆ. ಅಲ್ಲಾಹು, ರಸೂಲ್ ಮತ್ತು ಕುರ್‌ಆನಿನಲ್ಲಿ ವಿಶ್ವಾಸವಿಡುವ ಸತ್ಯ ವಿಶ್ವಾಸಿಗಳ ಕುರಿತು ಹೇಳುವುದಾದರೆ, ಪ್ರವಾದಿ(ಸ)ರು ನಾಲ್ಕಕ್ಕಿಂತ ಹೆಚ್ಚು ಪತ್ನಿಯರನ್ನು ಹೊಂದಿರುವುದರಲ್ಲಿ ಅಡಗಿರುವ ರಹಸ್ಯಗಳನ್ನು ತಿಳಿಯುವುದರ ಹೊರತು ಆ ಕುರಿತು ಎಳ್ಳಷ್ಟೂ ಸಂಶಯ ತಾಳುವ ಪ್ರಶ್ನೆಯೇ ಇಲ್ಲ. ಎಲ್ಲಾ ವಿಧಿನಿಷೇಧಗಳ ಪರಮಾಧಿಕಾರ ಅಲ್ಲಾಹನದ್ದಾಗಿದೆ. ಅಲ್ಲಾಹು ಒಂದು ವಿಷಯವನ್ನು ಅನುಮತಿಸಿದರೆ ಅಥವಾ ವಿರೋಧಿಸಿದರೆ ಅದರಲ್ಲಿ ಅಡಗಿರುವ ತತ್ವಗಳನ್ನು ಗ್ರಹಿಸಲು ಶ್ರಮಿಸುವ ಹೊರತು ಅದನ್ನು ವಿಮರ್ಶಿಸಲು ಅಥವಾ ಅದರಲ್ಲಿ ಭಿನ್ನಾಭಿಪ್ರಾಯ ವ್ಯಕ್ತಪಡಿಸಲು ಪ್ರವಾದಿಯವರಿಗೂ ಕೂಡದು. ಸೂರಾ: ಅಹಝಾಬ್‌ನ 50, 51, 52 ಮುಂತಾದ ಸೂಕ್ತಗಳಲ್ಲಿ ಅಲ್ಲಾಹು ಸ್ಪಷ್ಟವಾದ ಭಾಷೆಯಲ್ಲಿ ತಿಳಿಸಿದ ಮೇರೆಯೊಳಗಲ್ಲದೆ ಪ್ರವಾದಿ(ಸ)ರು ಒಂದೇ ಒಂದು ವಿವಾಹವನ್ನೂ ನಡೆಸಿಲ್ಲ. ಪ್ರವಾದಿಗಳನ್ನು ಅದರಲ್ಲೂ ಮುಖ್ಯವಾಗಿ ಅಂತಿಮ ಪ್ರವಾದಿ ಮುಹಮ್ಮದ್(ಸ)ರನ್ನು ಇತರರನ್ನು ಅಳೆಯುವ ಮಾನದಂಡದಲ್ಲಿ ಅಳೆಯಬಾರದು ಎಂದೆಲ್ಲಾ ಸತ್ಯವಿಶ್ವಾಸಿಗಳಿಗೆ ಗೊತ್ತಿದೆ. ಇನ್ನು ಖದೀಜ(ರ)ರ ನಂತರ ಪ್ರವಾದಿ (ಸ)ರು ನಡೆಸಿದ ಪ್ರತೀಯೊಂದು ವಿವಾಹದ ಕುರಿತು ದೃಷ್ಟಿ ಹರಿಸೋಣ.

(ಮುಂದುವರಿಯುವುದು)

# ಮಗನನ್ನು ಬಲಿಗೊಡಬೇಕಾಗಿಲ್ಲ! ಆಕಾಶದಿಂದ ಅಶರೀರವಾಣಿ...

(7ನೇ ಪುಟದಿಂದ)

ಮನತುಂಬಿದ ಇಬ್ರಾಹೀಮ್(ಅ) ಮತ್ತೆ ತಿರುಗಿ ನೋಡದೆ ಮಕ್ಕಾಕ್ಕೆ ವಿದಾಯ ಕೋರಿದರು. ಆ ಮೇಲೆ ಅಲ್ಲಿ ಝುಂಝುಂ ಚಿಮ್ಮಿ ಹರಿದದ್ದು ಮತ್ತು ಅಲ್ಲಿ ಜನವಾಸ ಪ್ರಾರಂಭಗೊಂಡದ್ದು ಎಲ್ಲವೂ ಇತಿಹಾಸ ಪ್ರಸಿದ್ಧವಾಗಿದೆ. ಅಲ್ಲಾಹನಲ್ಲಿ ಪೂರ್ಣ ಭರವಸೆಯಿಟ್ಟು ಮುಂದೆ ಸಾಗುವವರಿಗೆ ಅವನ ಮಹತ್ತಾದ ಸಂರಕ್ಷಣೆ ಲಭಿಸುತ್ತದೆಯೆಂಬುದರ ಪ್ರತ್ಯಕ್ಷ ಉದಾಹರಣೆ ಇಲ್ಲಿ ನಮಗೆ ಕಾಣಬಹುದಾಗಿದೆ.

ಇಬ್ರಾಹೀಮ್(ಅ)ರವರು ಫೆಲೆಸ್ತೀನ್‌ನಲ್ಲೇ ಖಾಯಂ ವಾಸವಾಗಿದ್ದರೂ ಆಗಾಗ ಮಕ್ಕಾಕ್ಕೆ ಬಂದು ಪತ್ನಿ ಹಾಜರಾ ಮತ್ತು ಪುತ್ರ ಇಸ್ಮಾಯೀಲರೊಂದಿಗೆ ಕೆಲ ದಿನಗಳ ಕಾಲ ತಂಗಿ ಹೋಗುತ್ತಿದ್ದರು. ಅದಾಗಲೇ ಝುಂಝುಂ ಬುಗ್ಗೆಯ ಮಹತ್ವವನ್ನರಿತ ಪರಿಸರ ಪ್ರದೇಶಗಳ ಜನರು ಮಕ್ಕಾಕ್ಕೆ ಬಂದು ವಾಸಿಸತೊಡಗಿದರು. ವರ್ಷಗಳುರುಳಿದವು. ಇಸ್ಮಾಯೀಲ್(ಅ)ರಿಗೆ 13 ವರ್ಷ ತುಂಬಿದಾಗ ಇಬ್ರಾಹೀಮ್(ಅ)ರಿಗೆ ಮತ್ತೊಂದು ಗಂಭೀರ ಪರೀಕ್ಷೆಯನ್ನೆದುರಿಸಬೇಕಾಗಿ ಬಂತು. ತನ್ನ ಮುದ್ದಿನ ಕಂದನನ್ನು ದೇವಮಾರ್ಗದಲ್ಲಿ ಬಲಿಯರ್ಪಿಸಬೇಕೆಂಬ ಅಲ್ಲಾಹನ ಆಜ್ಞೆ! ಜಗತ್ತಿನ ಇತಿಹಾಸದಲ್ಲಿ ಸಾಟಿಯಿಲ್ಲದ ಪರೀಕ್ಷೆಯನ್ನು ಅವರು ಎದುರಿಸಬೇಕಾಗಿದೆ. ಬಹು ದಿನಗಳ ಪ್ರಾರ್ಥನೆಯ ಫಲವಾಗಿ ಬದುಕಿನ ಸಂಧ್ಯಾಕಾಲದಲ್ಲಿ ಜನಿಸಿದ ವಾತ್ಸಲ್ಯನಿಧಿಯಾದ ಮುದ್ದು ಮಗನನ್ನು ಬಲಿಗೊಡಬೇಕೆಂಬ ದೇವಾಜ್ಞೆಯು ಆದರ್ಶ ಧೀರನಾದ ತಂದೆಯನ್ನು ಒಂದಿಷ್ಟೂ ವಿಚಲಿತರನ್ನಾಗಿ ಮಾಡಲಿಲ್ಲ. ಅದೆಷ್ಟೋ ಸಮಯಗಳಿಂದ ಎಷ್ಟು ಬಯಸಿದರೂ ಪ್ರಾರ್ಥಿಸಿದರೂ ತನಗೆ ಮಕ್ಕಳಾಗಿರಲಿಲ್ಲ. ಕೊನೆಗೊಂದು ದಿನ ಅಲ್ಲಾಹನ ತೀರ್ಮಾನದಂತೆ ತನಗೊಂದು ಮಗು ಸಿಕ್ಕಿತು. ಅದೇ ಅಲ್ಲಾಹು ಇದೀಗ ಮಗನನ್ನು ಬಲಿಗೊಡಬೇಕೆಂದು ಆಜ್ಞಾಪಿಸಿದ್ದಾನೆ. ಹಾಗಿರುವಾಗ ತಾನೇಕೆ ವೈಮನಸ್ಸು ತೋರಬೇಕು. ಅವರು ಬೇರೇನನ್ನೂ ಯೋಚಿಸಲಿಲ್ಲ. ಅಲ್ಲಾಹನ ಆದೇಶ ಅದೇನೇ ಆಗಿದ್ದರೂ ಅದನ್ನು ನೆರವೇರಿಸುವುದು ತನ್ನ ಕರ್ತವ್ಯವಾಗಿದೆ ಎಂಬ ಧೀರ ನಿರ್ಧಾರದೊಂದಿಗೆ ಇಬ್ರಾಹೀಮ್(ಅ) ಮಗನನ್ನು ಬಲಿಗೊಡಲು ಸಿದ್ಧರಾದರು. ಹೆತ್ತ ತಾಯಿಗೆ ವಿಷಯ ತಿಳಿಸಬೇಕಲ್ಲವೇ. ಅಲ್ಲಾಹನ ಆಜ್ಞೆಯಾಗಿರುವುದರಿಂದ ಸಮ್ಮತಿಸದಿರಲು ನಿರ್ವಾಹವಿಲ್ಲ. ಆದರ್ಶ ಧೀರನಾದ ಇಬ್ರಾಹೀಮ್(ಅ)ರವರ ಬೋಧನೆಯಲ್ಲಿ ದೇವಭಯ ಮೈಗೂಡಿಸಿಕೊಂಡಿರುವ ಹಾಜರಾ ಪತಿಯೊಂದಿಗೆ ಸಹಮತ ವ್ಯಕ್ತ ಪಡಿಸಿದರು. ಬಳಿಕ ಮಗನಿಗೆ ವಿಷಯ ತಿಳಿಸಿದಾಗ ಮಗನ ಪ್ರತಿಕ್ರಿಯೆ ಈ ರೀತಿಯಾಗಿತ್ತು: ಅಪ್ಪಾ, ತಮ್ಮೊಂದಿಗೆ ಅಲ್ಲಾಹು ಏನನ್ನು ಆಜ್ಞಾಪಿಸಿದ್ದಾನೋ ಆ ಆಜ್ಞೆಯಂತೆ ತಾವು ಕಾರ್ಯವೆಸಗಿರಿ. ನನ್ನನ್ನು ನೆನೆದು ತಾವು ತೊಂದರೆ ಪಡಬೇಡಿರಿ. ನಾನು ಸಹಿಸುತ್ತೇನೆ. ನಾನು ಪೂರ್ಣವಾಗಿ ಕ್ಷಮಾಶೀಲನಾಗಿದ್ದೇನೆಂದು ಹೆಚ್ಚು ತಡ ಮಾಡದೆ ತಮಗೆ ತಿಳಿಯಬಹುದು". ಎಂತಹ ಆದರ್ಶ ಧೀರತೆಯದು! ಯಾವುದೇ ಸಂದರ್ಭದಲ್ಲೂ ಸೃಷ್ಟಿಕರ್ತನಾದ ಅಲ್ಲಾಹನ ಆಜ್ಞೆಗೆ ಪರಮ ಪ್ರಾಧಾನ್ಯತೆ ನೀಡಬೇಕೆಂದು ಪ್ರತಿಪಾದಿಸಿದ ತಂದೆಯಿಂದ ಕಲಿತ ಪಾಠವಾಗಿದೆ ಅದು. ಇದು ಸತ್ಯವಿಶ್ವಾಸಿಗಳಿಗೂ ಪಾಠವಾಗಬೇಕು.

ಅದೋ, ಹೃದಯವಿದ್ರಾವಕ ಘಟನೆಯೊಂದು ಕೆಲವೇ ಕ್ಷಣಗಳಲ್ಲಿ ನಡೆಯಲಿದೆ. ತನ್ನ ಕರುಳಿನ ಕುಡಿಯನ್ನು ದೇವ ಮಾರ್ಗದಲ್ಲಿ ಬಲಿಯರ್ಪಿಸಲು ಇಬ್ರಾಹೀಮ್(ಅ) ಸನ್ನದ್ಧರಾದರು. ಅಲ್ಲಾಹನ ಪರೀಕ್ಷೆಯನ್ನು ಸ್ವೀಕರಿಸಲು ತಂದೆ ಮತ್ತು ಮಗ ಉತ್ಸಾಹಭರಿತರಾಗಿ ಮಿನಾದ ಮರುಭೂಮಿಯಲ್ಲಿ ನಡೆದು ಹೋಗುತ್ತಿದ್ದರು. ನಿಶ್ಚಿತ ಸ್ಥಳಕ್ಕೆ ತಲುಪಿದಾಗ ಇಸ್ಮಾಯೀಲ್(ಅ)ರವರು ತನ್ನ ಕತ್ತನ್ನು ಕೊಯ್ಯಲು ತಂದೆಗೆ ಅನುಕೂಲವಾಗುವ ರೀತಿಯಲ್ಲಿ ಹಣೆಯನ್ನು ನೆಲಕ್ಕೆ ತಾಗಿಸಿಟ್ಟು ಒಂದು ಪಾರ್ಶ್ವಕ್ಕೆ ತಿರುಗಿ ಮಲಗಿದರು. ತಂದೆಯಾದರೋ, ಹರಿತವಾದ ಚೂರಿಯೊಂದಿಗೆ ಮಗನ ಕತ್ತು ಕೊಯ್ಯಲು ಮುಂದಾಗುತ್ತಿದ್ದಾರೆ. ತಂದೆಯ ಕೈಯಲ್ಲಿದ್ದ ಚೂರಿ ಮಗನ ಕೊರಳಿನಾಳಕ್ಕೆ ಇಳಿಯಲಿದೆ. ಅಷ್ಟರಲ್ಲಿ ಅದೋ ಒಂದು (11ನೇ ಪುಟಕ್ಕೆ)

سلسلة الأحاديث الضعيفة والموضوعة

# ದುರ್ಬಲ ಮತ್ತು ಕೃತಕ ಹದೀಸ್‌ಗಳು



## ಒಂದು ಅವಲೋಕನ ಭಾಗ - 24

## ಶುಕ್ರವಾರದ ಮರಣ ಶುಭಕರವೇ

ಎಂ.ಇ. ಅಶ್ರಫ್ ಮುಸ್ಲಿಯಾರ್
ಕಾಸರಗೋಡು

ಶುಕ್ರವಾರ ಬೆಳಿಗ್ಗೆ ಅಥವಾ ರಾತ್ರಿ ಯಾರಾದರೂ ನಿಧನ ಹೊಂದಿದರೆ ಅವರ ಕುರಿತು "ಶುಕ್ರವಾರ ತೀರಿ ಹೋದರಲ್ಲ, ಬಹಳ ಒಳ್ಳೆಯ ಮರಣ" "ಹಾಜಾರ್ ಬೆಲ್ಯಾಸೆ ಮರ್‌ಚಿತ್ ಬೆಲ್ಯಾಸೆ ಖಬ್‌ರುಲು ಅದಾಬ್ ಇಲ್ಲೆ" ಇತ್ಯಾದಿ ಶುಭಸೂಚಕ ಮಾತುಗಳು ಮರಣದ ಮನೆಯಿಂದ ಕಿವಿಗಪ್ಪಳಿಸುತ್ತವೆ. ಒಂದು ಹೊತ್ತು ನಮಾಝ್ ಕೂಡಾ ಮಾಡದ, ಸದಾ ಕುಡಿತದ ಚಟ ಹೊಂದಿದ ನಾಮಧಾರಿ ಮುಸ್ಲಿಮ್ ಎಲ್ಲಾದರೂ ಶುಕ್ರವಾರ ತೀರಿ ಹೋದರೆ ಅದನ್ನೂ "ಅವನ ಭಾಗ್ಯ" ಎಂದು ಹಲುಬುವವರಿದ್ದಾರೆ.

ಮುಲ್ಲಾ-ಮುಸ್ಲಿಯಾರ್‌ಗಳಂತೂ ಐದು ಹೊತ್ತು ನಮಾಝ್‌ನ ಬಳಿಕ "ಅಲ್ಲಾಹುಮ್ಮ ಅಹ್‌ಯಿನಾ ಅಲಲ್ ಕಿತಾಬಿ ವಸ್ಸುನ್ನಃ ವ ಅಮಿತ್‌ನಾ ಮಅಲ್ ಈಮಾನಿ ವತ್ತೌಬ ಫೀ ಲೈಲತಿಲ್ ಜುಮುಅತಿ ಔಫೀ ನಹಾರಿಹಾ" (ಓ ಅಲ್ಲಾಹ್, ನಮ್ಮನ್ನು ನೀನು ಕುರ್‌ಆನ್, ಸುನ್ನತ್ ಪ್ರಕಾರ ಬದುಕಿಸು ಮತ್ತು ಈಮಾನ್ ಹಾಗೂ ತೌಬಾದೊಂದಿಗೆ ಶುಕ್ರವಾರ ರಾತ್ರಿ ಅಥವಾ ಹಗಲು ಮರಣಿಸು) ಎಂಬ ಪ್ರಾರ್ಥನೆಯನ್ನು ಮಾಡುವುದುಂಟು.

ಇದು ಶುಕ್ರವಾರ ಮರಣ ಹೊಂದುವುದು ಉತ್ತಮ ಎಂದು ಬಿಂಬಿಸಲು, ಅದಕ್ಕಾಗಿ ಹಾತೊರೆಯಲು ಕೆಲವು ಗ್ರಂಥಗಳಲ್ಲಿ ಕಂಡು ಬರುವ ದುರ್ಬಲ ಹದೀಸ್‌ಗಳ ಉದಾಹರಣೆಯಾಗಿದೆ.

ವಾಸ್ತವದಲ್ಲಿ ಮನುಷ್ಯ ಎಲ್ಲಿ ಮತ್ತು ಯಾವಾಗ ಮರಣ ಹೊಂದಿದ ಎಂಬುದಕ್ಕಿಂತ ಹೇಗೆ ಬದುಕಿದ ಎಂಬುದೇ ಅವನ ಪಾರತ್ರಿಕ ಜಯಾಪಜಯಗಳ ಪ್ರಧಾನ ಮಾನದಂಡವಾಗಿರುತ್ತದೆ. ಪವಿತ್ರ ಕುರ್‌ಆನ್ ಮತ್ತು ಸುನ್ನತ್‌ಗಳಲ್ಲಿ ಇದಕ್ಕೆ ಸಾಕಷ್ಟು ಉದಾಹರಣೆಗಳು ದೊರೆಯುತ್ತವೆ.

ಪ್ರವಾದಿ(ಸ)ರವರಿಗೆ ಲಕ್ಷಾಂತರ ಸಹಾಬಿಗಳಿದ್ದರು. ಅವರಲ್ಲಿ ಬದ್ರ್ ಯುದ್ಧದಲ್ಲಿ ಪಾಲ್ಗೊಂಡ ಅತಿರಥ ಮಹಾರಥರಿದ್ದರು. ಉಹ್ದ್, ಖಂದಕ್ ಯುದ್ಧದಲ್ಲಿ ಹುತಾತ್ಮರಾದ ಧೀರೋಧಾತ್ತ ಪುಣ್ಯಾತ್ಮರು, ಪ್ರವಾದಿ(ಸ) ರವರಿಂದ ಸ್ವರ್ಗದ ಸುವಾರ್ತೆ ಗಿಟ್ಟಿಸಿಕೊಂಡ "ಅಶರತುಲ್ ಮುಬಶ್ಶಿರೀನ್" ಮುಂತಾದ ಸರ್ವೋನ್ನತ ಔಲಿಯಾಗಳಿದ್ದರು.

ಇವರಲ್ಲಿ ಬಹುತೇಕ ಮಂದಿ ನಿಧನ ಹೊಂದಿದ್ದು ಶುಕ್ರವಾರೇತರ ದಿನಗಳಲ್ಲಿ ಎಂಬುದು ಚರಿತ್ರೆ ಕೆದಕಿದರೆ ವೇದ್ಯವಾಗುತ್ತದೆ. ಉದಾ: ಪ್ರಥಮ ಖಲೀಫ ಅಬೂಬಕರ್ ಸಿದ್ದೀಕ್(ರ) ನಿಧನ ಹೊಂದಿದ್ದು ಸೋಮವಾರ ರಾತ್ರಿ, ಅಬೂಮೂಸಲ್ ಅಶ್‌ಜ ಈ ಎಂಬ ದುಷ್ಟನ ದಾಳಿಗೊಳಗಾದ ದ್ವಿತೀಯ ಖಲೀಫ ಉಮರ್(ರ)ರವರು ಬುಧವಾರ ಬೆಳಿಗ್ಗೆ ತೀವ್ರ ತರದ ಗಾಯಗೊಂಡು ಮೂರು ದಿನಗಳ ನಂತರ ಅಂದರೆ ಶನಿವಾರದಂದು ಇಹಲೋಕ ತ್ಯಜಿಸುತ್ತಾರೆ, ಭಾನುವಾರ ದಿನ ಅವರ ದಫನ ಕಾರ್ಯ ನೆರವೇರುತ್ತದೆ. ಅಷ್ಟೇ ಏಕೆ ನಮ್ಮೆಲ್ಲರ ಕಣ್ಮಣಿ ಪ್ರವಾದಿ ಮುಹಮ್ಮದ್(ಸ) ರವರು ನಿಧನ ಹೊಂದಿದ್ದು ಶುಕ್ರವಾರವಾಗಿರದೆ ಸೋಮವಾರವಾಗಿತ್ತು ಎಂಬುದನ್ನು ತಿಳಿಯದವರು ಯಾರಿದ್ದಾರೆ?

"ಜಾಬಿರ್(ರ)ರವರಿಂದ, ಪ್ರವಾದಿ(ಸ) ರವರು ಹೇಳಿದರು: "ಯಾರಾದರೂ ಶುಕ್ರವಾರ ಹಗಲು ಅಥವಾ ರಾತ್ರಿ ನಿಧನ ಹೊಂದಿದರೆ ಆತ ಸಮಾಧಿ ಶಿಕ್ಷೆಯಿಂದ ಹುತಾತ್ಮನಾಗುವನು ಮತ್ತು ಪುನರುತ್ಥಾನ ದಿನ ಹುತಾತ್ಮನ ಅಲಂಕಾರದೊಂದಿಗೆ ಆತನನ್ನು ಹಾಜರು ಪಡಿಸಲಾಗುವುದು" (ಅಬೂ ನಈಮ್).

ಇದರ ಪರಂಪರೆಯಲ್ಲಿರುವ ಉಮರ್ ಬಿನ್ ಮೂಸ ಬಿನ್ ವಾಜಿಹ್ ಎಂಬ ವ್ಯಕ್ತಿ ಹದೀಸ್‌ಗಳನ್ನು ಸ್ವಯಂ ರಚಿಸುವ ವ್ಯಕ್ತಿ (ಅಸಾನುಲ್ ಮೀರ್‌ಝಾನ್ 4:332).

ಇನ್ನೊಂದು ವರದಿ ನೋಡಿ: "ಶುಕ್ರವಾರ ಹಗಲು ಅಥವಾ ರಾತ್ರಿ ಯಾರಾದರೂ ತೀರಿ ಹೋದರೆ ಅಂತಹವರನ್ನು ಅಲ್ಲಾಹ್ ಸಮಾಧಿ ಶಿಕ್ಷೆಯಿಂದ ರಕ್ಷಿಸುವನು" (ಅಹ್ಮದ್). ಇದರ ಸನದ್‌ನಲ್ಲಿರುವ ಮುಆವಿಯಾ ಬಿನ್ ಸಅ್‌ದ್ ಅವರ ವಿಶ್ವಾಸಾರ್ಹತೆ ಬಗ್ಗೆ ಹದೀಸ್ ಪಂಡಿತರಲ್ಲಿ ಆಕ್ಷೇಪಗಳಿವೆ.

ಇದೇ ಬಗೆಯ ಇನ್ನೊಂದು ಹದೀಸ್ ಹೀಗಿದೆ: "ಯಾರು ಶುಕ್ರವಾರ ಮರಣ ಹೊಂದುತ್ತಾರೋ ಅವರು ಖಬ್ರ್ ಶಿಕ್ಷೆಯಿಂದ ಮುಕ್ತರಾಗುತ್ತಾರೆ" (ಹದೀಸ್).

ಇದರ ಪರಂಪರೆಯಲ್ಲಿರುವ ಯಝೀದ್ ಬಿನ್ ಅಬಾನ್ ರಕಾಶಿ ದುರ್ಬಲ ವ್ಯಕ್ತಿ (ಅಸಾನುಲ್ ಮಿರ್‌ಝಾನ್ 215).

ಇಮಾಮ್ ಐನಿ(ರ) ಹೇಳುತ್ತಾರೆ: "ಶುಕ್ರವಾರದ ಮರಣ ಶುಭಕರ ಎಂಬ ಅರ್ಥದಲ್ಲಿ ವರದಿಯಾಗಿರುವ ಸರ್ವ ಹದೀಸ್‌ಗಳೂ ದುರ್ಬಲ" (ಉಮ್ದತುಲ್‌ಕಾರಿ 8:18).

ಶುಕ್ರವಾರ ಮರಣ ಹೊಂದಿದವರಿಗೆ ಖಬ್ರ್ ಶಿಕ್ಷೆಯಿಂದ ಮುಕ್ತಿ ಇದೆ ಎಂದು ಸಾರುವ ಹದೀಸ್‌ಗಳು ಮುಸ್ನದ್ ಅಹ್ಮದ್ (ಭಾಗ 2, ಪುಟ 220, ನಂಬ್ರ 7050). ಹಿಲ್‌ಯತುಲ್ ಅವ್‌ಲಿಯಾ (ಭಾಗ 3, ಪುಟ 181). ಮಜ್ಮ ಉಝ್ಝವಾಯಿದ್ (ಭಾಗ 2, ಪುಟ 319) ಅಲ್ ಮಕಾಸಿದುಲ್ ಹಸನಃ (ಹದೀಸ್ ನಂಬ್ರ 1186) ಎಂಬಿತ್ಯಾದಿ ಗ್ರಂಥಗಳಲ್ಲಿರುವುದನ್ನು ಪ್ರಜ್ಞ ಓದುಗರು ಪರಿಶೀಲಿಸಬಹುದು.

ಇಂತಹ ಹದೀಸ್‌ಗಳ ಆಧಾರದಲ್ಲಿ ಅತಿರೇಕದ ಅಭಿಪ್ರಾಯ ಪ್ರಕಟಿಸಿದ ವಿದ್ವಾಂಸರಿದ್ದಾರೆ. ಹನಫಿ ವಿದ್ವಾಂಸರೊಬ್ಬರು ಹೇಳುವುದು ಗಮನಿಸಿ: "ಮರಣ ಹೊಂದಿದ ದಿನ ಶಾಶ್ವತನಾಗಿ ಸಮಾಧಿ ಶಿಕ್ಷೆ ತೆರವುಗೊಳ್ಳಲಿದೆ" (ರದ್ದುಲ್ ಮುಖ್ತಾರ್, ಭಾಗ 2, ಪುಟ 165).

ಇನ್ನು ರಮದಾನ್ ತಿಂಗಳ ಯಾವುದಾದರೂ ಒಂದು ಪ್ರತ್ಯೇಕ ದಿನ ಅಥವಾ ರಾತ್ರಿ ಮರಣ ಹೊಂದಿದರೆ ಅದನ್ನೂ ಮೃತನ ಪಾಲಿನ ಅದೃಷ್ಟವಾಗಿ ಪರಿಗಣಿಸುವವರಿದ್ದಾರೆ. ತಕ್ಲೀದಿ ಕೃತಿಯೊಂದು ಈ ಕುರಿತು ಬರೆದಿರುವುದು ನೋಡಿ "ಯಾರು ರಮದಾನ್ ತಿಂಗಳ ಉಪವಾಸ ಪೂರ್ತಿ ಮಾಡಿ ಅದೇ ವರ್ಷ ಮರಣ ಹೊಂದುತ್ತಾರೋ ಅವರು ಸ್ವರ್ಗ ಪ್ರವೇಶಿಸುವರು" (ಫದಾಇಲುಶಹ್‌ರು ರಮದಾನ್ 44, 48).

ಅನಸ್(ರ) ಅವರು ಹೇಳಿದ್ದಾಗಿ ಕೆಲವರು ಉಲ್ಲೇಖಿಸಿದ ಒಂದು ದುರ್ಬಲ ಹದೀಸ್ ಹೀಗಿದೆ: ಖಂಡಿತವಾಗಿಯೂ ರಮದಾನ್ ತಿಂಗಳಲ್ಲಿ ಸಮಾಧಿಸ್ಥರಿಗೆ ಖಬ್ರ್ ಶಿಕ್ಷೆಯಿಂದ ವಿನಾಯಿತಿ ನೀಡಲಾಗುವುದು" (ಅಹ್‌ವಾಲುಲ್ ಖುಬೂರ್ 105-106).

ಶುಕ್ರವಾರ ಖಬ್ರ್ ಝಿಯಾರತ್‌ಗೆ ಕೆಲವರು ವಿಶೇಷತೆ ಕಲ್ಪಿಸುವುದಿದೆ. ಇದು ಕೂಡಾ ಪ್ರಮಾಣ ವಿರುದ್ಧವಾದ ಸಂಪ್ರದಾಯ. ಇತರೆಲ್ಲಾ ದಿನಗಳಿಗಿಂತ ಝಿಯಾರತ್‌ನ ವಿಷಯದಲ್ಲಿ ಶುಕ್ರವಾರಕ್ಕೆ ಹೆಚ್ಚಿನ ಮಹತ್ವವೇನೂ ಇಲ್ಲ. ಇಸ್ಲಾಮ್ ಬೋಧಿಸಿದ ಯಥಾರ್ಥ ಖಬ್ರ್ ಝಿಯಾರತ್‌ಗೆ ಇಂತಿಂತಹ ದಿನವೇ ಆಗಬೇಕೆಂದಿಲ್ಲ. ಯಾವ ದಿನ ಝಿಯಾರತ್ ಮಾಡಿದರೂ ಪುಣ್ಯಾರ್ಹವೇ.

ಶುಕ್ರವಾರದಂದು ಖಬ್ರ್ ಝಿಯಾರತ್‌ಗೆ ಜನರು ಹಾತೊರೆಯಲು ಪ್ರೇರಕ ಶಕ್ತಿಯಾಗಿರುವ ಒಂದು ಹದೀಸ್ ಹೀಗಿದೆ: "ಯಾರು ಜುಮುಅ ದಿನ ಹೆತ್ತವರ ಖಬ್ರ್ ಸಂದರ್ಶಿಸಿ ಯಾಸೀನ್ ಪಠಿಸುತ್ತಾರೋ ಅವರ ಪಾಪಗಳನ್ನು ಮನ್ನಿಸಲಾಗುವುದು" (ಇಬ್ನ್ ಅದಿ).

ಈ ಹದೀಸ್ ಕೃತಕ ನಿರ್ಮಿತವಾದುದು. ಇಬ್ನುಲ್ ಖಯ್ಯೂಮ್(ರ) ಇದನ್ನು ತಮ್ಮ "ಅಲ್ ಮೌದೂಆತ್" ಎಂಬ ಕೃತಕ ಹದೀಸ್‌ಗಳ ಸಂಗ್ರಹ ಗ್ರಂಥದಲ್ಲಿ ವಿವರಿಸಿದ್ದಾರೆ. ಈ ಹದೀಸ್‌ನ ಸನದ್‌ನಲ್ಲಿರುವ ಅಂರ್‌ಬಿನ್ ಝಿಯಾದ್ ಕೃತಕ ಹದೀಸ್‌ಗಳ ನಿರ್ಮಾಪಕ ಮತ್ತು ನಿರಾಧಾರ ವಿಚಾರ ಧಾರೆಗಳನ್ನು ಹದೀಸ್ ಆಗಿ ಹೆಣೆಯುವ ವ್ಯಕ್ತಿ ಎಂಬುದಾಗಿ ವಿದ್ವಾಂಸರು ಸ್ಪಷ್ಟ ಪಡಿಸಿದ್ದಾರೆ. (ಅಲ್ ಕಾಮಿಲ್ 5, 1081)



## ಓದುಗರ ಗಮನಕ್ಕೆ

**ಪವಿತ್ರ ಸಂದೇಶ ಪತ್ರಿಕೆಗೆ ಚಂದಾದಾರರಾಗಲು, ಚಂದಾ ನವೀಕರಿಸಲು ಮತ್ತು ಪತ್ರಿಕೆ ಸರಿಯಾಗಿ ತಲುಪದಿದ್ದರೆ ಈ ಕೆಳಗಿನ ನಂಬರ್‌ನಲ್ಲಿ ಸಂಪರ್ಕಿಸಿರಿ:**

**9482946133**

## ಅಧ್ಯಾಯ - 3 ಆಲ್ ಇಮ್ರಾನ್

ಒಟ್ಟು ಸೂಕ್ತಗಳು: 200 | ಮುಹಮ್ಮದ್ ಅಮಾನಿ ಮೌಲವಿ | ಪ್ರಕಟಿತ ಸೂಕ್ತಗಳು: 66, 67, 68, 69

66 هَاَنْتُمْ هٰۤؤُلَاۤءِ حَاجَجْتُمْ فِيْمَا لَكُمْ بِهٖ عِلْمٌ فَلِمَ تُحَآجُّوْنَ فِيْمَا لَيْسَ لَكُمْ بِهٖ عِلْمٌ ؕ وَاللّٰهُ يَعْلَمُ وَاَنْتُمْ لَا تَعْلَمُوْنَ ۝٦٦

67 مَا كَانَ اِبْرٰهِيْمُ يَهُوْدِيًّا وَّلَا نَصْرَانِيًّا وَّلٰكِنْ كَانَ حَنِيْفًا مُّسْلِمًا ؕ وَمَا كَانَ مِنَ الْمُشْرِكِيْنَ ۝٦٧

68 اِنَّ اَوْلَى النَّاسِ بِاِبْرٰهِيْمَ لَلَّذِيْنَ اتَّبَعُوْهُ وَهٰذَا النَّبِىُّ وَالَّذِيْنَ اٰمَنُوْا ؕ وَاللّٰهُ وَلِىُّ الْمُؤْمِنِيْنَ ۝٦٨

69 وَدَّتْ طَّآئِفَةٌ مِّنْ اَهْلِ الْكِتٰبِ لَوْ يُضِلُّوْنَكُمْ ؕ وَمَا يُضِلُّوْنَ اِلَّاۤ اَنْفُسَهُمْ وَمَا يَشْعُرُوْنَ ۝٦٩

| | | | | | |
|---|---|---|---|---|---|
| | | 66 | | | |
| ತಿಳುವಳಿಕೆ عِلْمٌ | ಅದರ ಕುರಿತು ನಿಮಗೆ لَكُمْ بِهٖ | ಯಾವ ವಿಷಯದಲ್ಲಿ فِيْمَا | ನೀವು ವಾದ ಮಾಡಿದಿರಿ حَاجَجْتُمْ | ಇಂತಹವರಾಗಿರುತ್ತೀರಿ هٰۤؤُلَاۤءِ | ಓ (ಜನರೇ) ನೀವು هَاَنْتُمْ |
| ಅಲ್ಲಾಹು ತಿಳಿಯುತ್ತಾನೆ وَاللّٰهُ يَعْلَمُ | ತಿಳುವಳಿಕೆ عِلْمٌ | ನಿಮಗೆ ಅದರ ಬಗ್ಗೆ لَكُمْ بِهٖ | ಇಲ್ಲದ ವಿಷಯದಲ್ಲಿ فِيْمَا لَيْسَ | ನೀವು ವಾದ ಮಾಡುತ್ತೀರಿ تُحَآجُّوْنَ | ಆದರೆ ಯಾಕಾಗಿ فَلِمَ |
| | | | | ತಿಳಿಯದು لَا تَعْلَمُوْنَ | ಆದರೆ ನಿಮಗೆ وَاَنْتُمْ |
| | | 67 | | | |
| ಋಜುಮನಸ್ಕ حَنِيْفًا | ಆದರೂ ಅವರು ಆಗಿದ್ದರು وَّلٰكِنْ كَانَ | ಮತ್ತು ಕ್ರೈಸ್ತರೂ ಆಗಿರಲಿಲ್ಲ وَّلَا نَصْرَانِيًّا | ಯಹೂದಿ يَهُوْدِيًّا | ಇಬ್ರಾಹೀಮರು ಆಗಿರಲಿಲ್ಲ مَا كَانَ اِبْرٰهِيْمُ | |
| | | ಮುಶ್ರಿಕರಲ್ಲಿ ಸೇರಿದ(ವನು) مِنَ الْمُشْرِكِيْنَ | ಮತ್ತು ಆಗಿರಲೂ ಇಲ್ಲ وَمَا كَانَ | ಮುಸ್ಲಿಮನಾದ مُّسْلِمًا | |
| | | 68 | | | |
| ಈ ಪ್ರವಾದಿ وَهٰذَا النَّبِىُّ | ಅವರನ್ನು ಅನುಸರಿಸಿದವರು اتَّبَعُوْهُ | ಯಾರೆಂದರೆ لَلَّذِيْنَ | ಇಬ್ರಾಹೀಮರೊಂದಿಗೆ بِاِبْرٰهِيْمَ | ಜನರ ಪೈಕಿ النَّاسِ | ನಿಶ್ಚಯವಾಗಿಯೂ ಹೆಚ್ಚು ಸಂಬಂಧವಿರುವವರು اِنَّ اَوْلَى |
| | | ಸತ್ಯವಿಶ್ವಾಸಿಗಳ الْمُؤْمِنِيْنَ | ರಕ್ಷಕನಾಗಿದ್ದಾನೆ وَلِىُّ | ಅಲ್ಲಾಹನಾದರೋ وَاللّٰهُ | ಮತ್ತು ವಿಶ್ವಾಸವಿಟ್ಟವರು وَالَّذِيْنَ اٰمَنُوْا |
| | | 69 | | | |
| ಅವರು ನಿಮ್ಮನ್ನು ಪಥಭ್ರಷ್ಟಗೊಳಿಸುತ್ತಿದ್ದರೆ (ಎಂದು) لَوْ يُضِلُّوْنَكُمْ | ಗ್ರಂಥದವರ ಪೈಕಿ مِّنْ اَهْلِ الْكِتٰبِ | ಒಂದು ಪಂಗಡದವರು طَّآئِفَةٌ | ಆಶಿಸುತ್ತಾರೆ وَدَّتْ | | |
| | ಮತ್ತು ಅವರು ಗ್ರಹಿಸುವುದಿಲ್ಲ وَمَا يَشْعُرُوْنَ | ತಮ್ಮನ್ನೇ ವಿನಾ اِلَّاۤ اَنْفُسَهُمْ | ಅವರು ಪಥಭ್ರಷ್ಟರನ್ನಾಗಿ ಮಾಡುವುದಿಲ್ಲ وَمَا يُضِلُّوْنَ | | |

66. ಓ (ಜನರೇ) ನೀವು ಇಂತಹವರಾಗಿರುತ್ತೀರಿ. ನಿಮಗೆ ತಿಳಿದಿರುವ ವಿಷಯದಲ್ಲಿ ನೀವು (ತರ್ಕಿಸಿ) ವಾದ ಮಾಡಿದಿರಿ. ಆದರೆ ನಿಮಗೆ ತಿಳಿದಿರದ ವಿಷಯದಲ್ಲಿ ನೀವೇಕೆ ವಾದಿಸುತ್ತಿರುವಿರಿ? ಅಲ್ಲಾಹು (ಎಲ್ಲವನ್ನೂ) ತಿಳಿಯುತ್ತಾನೆ, ನಿಮಗೆ ತಿಳಿದಿಲ್ಲ.

67. ಇಬ್ರಾಹೀಮರು ಯಹೂದಿಯೋ ಕ್ರೈಸ್ತರೋ ಆಗಿರಲಿಲ್ಲ. ಆದರೆ ಅವರು ಋಜುಮನಸ್ಕರೂ ಅಲ್ಲಾಹನಿಗೆ ಶರಣಾಗತರಾದವರೂ (ಮುಸ್ಲಿಮರೂ) ಆಗಿದ್ದರು ಮತ್ತು ಅವರು ಬಹುದೇವ ವಿಶ್ವಾಸಿಗಳಲ್ಲಿ ಸೇರಿದವರಾಗಿರಲಿಲ್ಲ.

68. ನಿಶ್ಚಯವಾಗಿಯೂ ಜನರ ಪೈಕಿ ಇಬ್ರಾಹೀಮರೊಡನೆ ಹೆಚ್ಚು ಸಂಬಂಧವುಳ್ಳವರೆಂದರೆ, ಅವರನ್ನು ಅನುಸರಿಸಿದವರು ಮತ್ತು ಈ ಪ್ರವಾದಿ ಹಾಗೂ ಸತ್ಯವಿಶ್ವಾಸಿಗಳು. ಅಲ್ಲಾಹು ಸತ್ಯವಿಶ್ವಾಸಿಗಳ ರಕ್ಷಕ(ಅಥವಾ ಸಹಾಯಕ)ನಾಗಿರುತ್ತಾನೆ.

69. (ಸತ್ಯವಿಶ್ವಾಸಿಗಳೇ) ನಿಮ್ಮನ್ನು ಪಥಭ್ರಷ್ಟಗೊಳಿಸುತ್ತಿದ್ದರೆ (ಚೆನ್ನಾಗಿತ್ತು) ಎಂದು ಗ್ರಂಥದವರಲ್ಲಿ ಒಂದು ಪಂಗಡದವರು ಆಶಿಸುತ್ತಾರೆ. (ವಾಸ್ತವದಲ್ಲಿ) ಅವರು ತಮ್ಮನ್ನೇ ವಿನಾ (ಇನ್ನಾರನ್ನೂ) ಪಥಭ್ರಷ್ಟರಾಗಿ ಮಾಡುವುದಿಲ್ಲ. (ಆದರೆ ಅದನ್ನು) ಅವರು ಗ್ರಹಿಸುವುದಿಲ್ಲ.

## ಆಕಾಶದಿಂದ ಅಶರೀರವಾಣಿ...

(9ನೇ ಪುಟದಿಂದ)

ಅಶರೀರವಾಣಿ! ಓ ಇಬ್ರಾಹೀಮ್, ಮಗನನ್ನು ಬಿಟ್ಟು ಬಿಡಿರಿ. ಅವನನ್ನು ಕೊಯ್ಯಬೇಕಾಗಿಲ್ಲ. ನಿನಗೆ ಹೆಚ್ಚು ಪ್ರೀತಿ ನನ್ನಲ್ಲೋ ಅಥವಾ ನಿನ್ನ ಮಗನಲ್ಲೋ ಎಂದು ನಿನ್ನನ್ನು ನಾನು ಪರೀಕ್ಷಿಸಿದ್ದು ಮಾತ್ರ. ಅದರಲ್ಲಿ ನೀನು ವಿಜೇತನಾಗಿರುವೆ. ಅವನ ಬದಲಿಗೆ ಒಂದು ಆಡನ್ನು ಬಲಿಗೊಟ್ಟರೆ ಸಾಕು. ತಕ್ಷಣ ಅಲ್ಲಾಹು ಒಂದು ಆಡನ್ನು ತಲುಪಿಸಿ ಕೊಟ್ಟಾಗ ಇಬ್ರಾಹೀಮ್(ಅ) ಆ ಆಡನ್ನು ಬಲಿಗೊಟ್ಟರು. ಈ ಮಹತ್ತಾದ ಘಟನೆಯ ನೆನಪನ್ನು ಲೋಕಾಂತ್ಯದ ವರೆಗೆ ಉಳಿಸಲಿಕ್ಕಾಗಿ ಅಲ್ಲಾಹನಿಚ್ಛಿಸಿದ್ದರಿಂದ ವಿಶ್ವದೆಲ್ಲೆಡೆ ಮುಸ್ಲಿಮರು ಈದುಲ್ ಅದ್‌ಹಾ(ಬಕ್ರೀದ್)ದಂದು ಮೃಗ ಬಲಿ ನಡೆಸುತ್ತಾರೆ.

ಇಸ್ಮಾಯೀಲ್(ಅ)ರವರು ಯುವತ್ವಕ್ಕೆ ತಲುಪಿದ ಸಂದರ್ಭ. ಕಅಬಾ ನಿರ್ಮಾಣಕ್ಕಾಗಿ ಇಬ್ರಾಹೀಮ್(ಅ)ರಿಗೆ ಅಲ್ಲಾಹನ ಆಜ್ಞೆ ಲಭಿಸುತ್ತದೆ. ಅದರಂತೆ ಅವರು ಫೇಲೆಸ್ತೀನ್‌ನಿಂದ ಮಕ್ಕಾಕ್ಕೆ ಬಂದು ಮಗನಿಗೆ ವಿಷಯ ತಿಳಿಸುತ್ತಾರೆ. ಇಬ್ಬರೂ ಸೇರಿ ಕಅಬಾ ನಿರ್ಮಾಣ ಕಾರ್ಯದಲ್ಲಿ ಮಗ್ನರಾದರು. ಇದೀಗ ಕಅಬಾ ಇರುವಲ್ಲಿಂದ ಸ್ವಲ್ಪವೇ ದೂರದಲ್ಲಿ ಜಬಲ್ ಅಬೂಕುಬೈಸ್ ಎಂಬ ಪರ್ವತವಿದೆ. ಆ ಪರ್ವತದಿಂದ ಅವರು ಕಅಬಾ ನಿರ್ಮಾಣಕ್ಕಾಗಿ ಬಂಡೆ ಕಲ್ಲುಗಳನ್ನು ಹೊತ್ತು ತರುತ್ತಿದ್ದರು. ಪುತ್ರ ಇಸ್ಮಾಯೀಲ್(ಅ) ಕಲ್ಲುಗಳನ್ನು ಎತ್ತಿ ಕೊಡುತ್ತಿದ್ದರು. ತಂದೆ ಇಬ್ರಾಹೀಮ್(ಅ) ಗೋಡೆ ಕಟ್ಟುತ್ತಿದ್ದರು. ಗೋಡೆಯು ಒಂದು ಆಳಿನಷ್ಟು ಎತ್ತರವಾದಾಗ ಎತ್ತರದ ಒಂದು ಕಲ್ಲಿನ ಮೇಲೆ ನಿಂತು ಇಬ್ರಾಹೀಮ್(ಅ) ಗೋಡೆ ಕೆಲಸವನ್ನು ಪೂರ್ಣಗೊಳಿಸಿದ್ದರು. ಅವರು ಗೋಡೆ ಕಟ್ಟಲಿಕ್ಕಾಗಿ ಹತ್ತಿ ನಿಲ್ಲುತ್ತಿದ್ದ ಆ ಕಲ್ಲನ್ನು ಮಖಾಮು ಇಬ್ರಾಹೀಮ್ ಎಂದು ಹೇಳಲಾಗುತ್ತದೆ. ಕಅಬಾ ನಿರ್ಮಾಣ ಕಾರ್ಯವನ್ನು ಪೂರ್ಣಗೊಳಿಸಿದ ಅವರಿಬ್ಬರು ಆ ಸತ್ಕರ್ಮವನ್ನು ಸ್ವೀಕರಿಸಲಿಕ್ಕಾಗಿ ಅಲ್ಲಾಹನೊಡನೆ ಪ್ರಾರ್ಥಿಸಿದರು.

ಜಗದೊಡೆಯನಾದ ಅಲ್ಲಾಹನನ್ನು ಆರಾಧಿಸಲಿಕ್ಕಾಗಿ ಭೂಮಿಯಲ್ಲಿ ಪ್ರಥಮವಾಗಿ ನಿರ್ಮಿಸಲ್ಪಟ್ಟ ವಿಶುದ್ಧ ಕಅಬಾದಲ್ಲಿ ಹಜ್ಜ್ ಕರ್ಮವನ್ನು ನಿರ್ವಹಿಸಲಿಕ್ಕಾಗಿ ಜನ ಸಮುದಾಯಕ್ಕೆ ಕರೆ ಕೊಡುವ ಕಾರ್ಯವನ್ನು ಪ್ರಪ್ರಥಮವಾಗಿ ಇಬ್ರಾಹೀಮ್(ಅ)ರವರೇ ಅಲ್ಲಾಹನ ಆದೇಶದಂತೆ ಹಜ್ಜ್ ಕರ್ಮವನ್ನು ನಿರ್ವಹಿಸುವ ಮೂಲಕ ನೆರವೇರಿಸಿದರು. ಅಂದಿನಿಂದಲೂ ಪವಿತ್ರ ಹಜ್ಜ್ ಕರ್ಮವನ್ನು ನಿರ್ವಹಿಸಲಿಕ್ಕಾಗಿ ಪ್ರತೀ ವರ್ಷ ಜಗತ್ತಿನೆಲ್ಲೆಡೆಯಿಂದ ಜನರು ಪ್ರವಾಹೋಪಾದಿಯಲ್ಲಿ ಕಅಬಾಲಯದಲ್ಲಿ ಬಂದು ಸೇರುತ್ತಿದ್ದಾರೆ. ಕಳೆದ ನಾಲ್ಕು ಸಾವಿರ ವರ್ಷಗಳಿಗಿಂತಲೂ ಹೆಚ್ಚು ಸುದೀರ್ಘ ಕಾಲದಿಂದ ನಿರಂತರವಾಗಿ ಹಜ್ಜ್ ಕರ್ಮಗಳು ನಡೆದು ಬರುತ್ತಿದ್ದರೂ ಇದುವರೆಗೆ ಯಾವುದೇ ಕುಂದುಂಟಾಗಲಿಲ್ಲ. ಲೋಕಾಂತ್ಯದ ವರೆಗೂ ಅದು ಹಾಗೆಯೇ ಮುಂದುವರಿಯಲಿದೆ. ಇನ್‌ಶಾ ಅಲ್ಲಾಹ್. ಸರ್ವಸ್ವವನ್ನೂ ಅಲ್ಲಾಹನ ಮಾರ್ಗದಲ್ಲಿ ಸಮರ್ಪಿಸಿದ ಇಬ್ರಾಹೀಮ್(ಅ)ರವರ ಪಾವನ ಕುಟುಂಬದ ಸ್ಮರಣೆಯನ್ನು ಶಾಶ್ವತವಾಗಿ ಉಳಿಸಲಿಕ್ಕೆ ಅಗತ್ಯವಿರುವ ಎಲ್ಲಾ ವ್ಯವಸ್ಥೆಗಳನ್ನು ಅಲ್ಲಾಹು ಅಂದೇ ಮಾಡಿಟ್ಟಿದ್ದಾನೆ. ಆ ಸ್ಮರಣೆಯನ್ನು ಈ ವರ್ಷದ ಬಕ್ರೀದ್ ಹಬ್ಬದ ಸುದಿನದಂದು ಮತ್ತೊಮ್ಮೆ ಪುನರಾವರ್ತಿಸಲು ನಮಗೊಂದು ಅವಕಾಶ ಸಿಕ್ಕಿದೆ. ಅಲ್ಲಾಹು ಅಕ್ಬರ್, ವಲಿಲ್ಲಾಹಿಲ್ ಹಮ್ದ್. ●

Name & Address:

**PAVITHRA SANDESHA**
*Kannada Fortnightly*
Polymer House, 2nd Floor, Nellikai Road, Mangalore - 575 001

Regd. With RNI No.: 63987/96
Postal Regd. No. KA/SK/MNG/160/2012-2014
Licence to Post without prepayment.
WPP/SK/MNG-104/2012-2014
Posted at Head Post Office, Mangalore.
Posting Date: 13th & 28th of Every Month
Publication Date: 10th & 25th of Every Month



# ವಾಟ್ಸಪ್ ಸಂದೇಶ ಕಾಲಂ

ಆಮಾಅತಿಗಾಗಿ ಮಸೀದಿಗೆ ಹೋಗುವುದು, ಹೋಗುವಾಗ ಶಾಂತ ರೀತಿಯಲ್ಲಿ ನಡೆದು ಹೋಗುವುದು **ಪ್ರವಾದಿ ಚರ್ಯೆ**ಯಾಗಿದೆ.



## ಕಾರ್ಮಿಕನ ಮಜೂರಿ

"ಕಾರ್ಮಿಕನ ಬೆವರು ಆರುವುದಕ್ಕೆ ಮುಂಚಿತವಾಗಿ ಅವನ ವೇತನವನ್ನು ಕೊಟ್ಟು ಬಿಡಿರಿ"
-ಪ್ರವಾದಿ ಮುಹಮ್ಮದ್(ಸ)

ಪ್ರಾಣಿಗಳ ಮೇಲೆ ದಯೆ ತೋರುವುದು **ಪ್ರವಾದಿ ಚರ್ಯೆ**ಯಾಗಿದೆ.



ಮಲಗುವಾಗ ವುದೂ ಮಾಡಿ ಬಲ ಬದಿಗೆ ಸರಿದು ಮಲಗುವುದು **ಪ್ರವಾದಿ ಚರ್ಯೆ**ಯಾಗಿದೆ.



ಪತ್ನಿಯೊಂದಿಗೆ ನಗುವುದು ಆಡುವುದು, ತಮಾಷೆಯಾಡುವುದು **ಪ್ರವಾದಿ ಚರ್ಯೆ**ಯಾಗಿದೆ.



يَاأَيُّهَا النَّاسُ ضُرِبَ مَثَلٌ فَاسْتَمِعُوا لَهُ إِنَّ الَّذِينَ تَدْعُونَ مِنْ دُونِ اللَّهِ لَنْ يَخْلُقُوا ذُبَابًا وَلَوِ اجْتَمَعُوا لَهُ وَإِنْ يَسْلُبْهُمُ الذُّبَابُ شَيْئًا لَا يَسْتَنْقِذُوهُ مِنْهُ ضَعُفَ الطَّالِبُ وَالْمَطْلُوبُ ۝



ಓ ಜನರೇ, (ಇದೋ) ಒಂದು ಉಪಮೆಯನ್ನು ವಿವರಿಸಲಾಗುತ್ತಿದೆ. ಅದರ ಕಡೆಗೆ ನೀವು ಕಿವಿಗೊಡಿರಿ. ನಿಶ್ಚಯವಾಗಿಯೂ ಅಲ್ಲಾಹನ ಹೊರತು ನೀವು ಕರೆದು (ಪ್ರಾರ್ಥಿಸಿ)ಕೊಂಡಿರುವವರು ಒಂದು ನೊಣವನ್ನೂ (ಸಹ) ಸೃಷ್ಟಿಸಲಾರರು. ಅದಕ್ಕಾಗಿ ಅವರು(ಎಲ್ಲರೂ) ಒಟ್ಟುಗೂಡಿದರೂ ಸರಿ. ಒಂದು ವೇಳೆ ನೊಣವು ಅವರಿಂದ ಏನನ್ನಾದರೂ ಕಸಿದುಕೊಂಡರೆ ಅದನ್ನು ಅವರು ಅದರ ಬಳಿಯಿಂದ ಮರು ವಶಪಡಿಸಲಾರರು. ಪ್ರಾರ್ಥಿಸುವವನೂ ಪ್ರಾರ್ಥಿಸಲ್ಪಡುವವನೂ ದುರ್ಬಲರೇ. (22x73)

ಪತ್ನಿಗೆ ಒಂದು ತುತ್ತು ಅನ್ನವನ್ನು ಉಣಿಸುವುದು **ಪ್ರವಾದಿ ಚರ್ಯೆ**ಯಾಗಿದೆ.



ಮುಖವನ್ನು ಸಿಂಡರಿಸದೆ ಎಲ್ಲರೊಂದಿಗೆ ಮುಗುಳ್ನಗುವುದು **ಪ್ರವಾದಿ ಚರ್ಯೆ**ಯಾಗಿದೆ.



ಮಕ್ಕಳೊಂದಿಗೆ ಆಟವಾಡುವುದು **ಪ್ರವಾದಿ ಚರ್ಯೆ**ಯಾಗಿದೆ.



Printed, Published & Owned by RIYAZ AHMED on behalf of SATHYA PRAKASHANA PUBLICATION TRUST MANGALORE, Printed at Digantha Mudrana Ltd., Yeyyadi, Mangalore, D.K. Published at 20-2-155/1, 2nd Floor, Polymer House Bldg., Nellikai Road, Mangalore - 575 001, D.K.. D.T.P.: Sowmya Graphics, Mangalore. Editor: M.G. Muhammad